# ಕರ್ನಾಟಕದ ಆಧುನಿಕ ಭಿತ್ತಿಚಿತ್ರ / ಶಿಲ್ಪಕಲೆ

ಬೆಂಗಳೂರು, ಮೈಸೂರು, ಬೆಳಗಾಂವಿ ಮತ್ತು ಗುಲಬರ್ಗಾ ವಿಭಾಗಗಳಲ್ಲಿನ ಆಯ್ದ ನಮೂನೆಗಳ ಅಧ್ಯಯನ

ಎಂ.ಫಿಲ್ ಪದವಿಗಾಗಿ ದೃಶ್ಯಕಲಾ ವಿಭಾಗ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಕಿರು ಸಂಶೋಧನಾ ಪ್ರಬಂಧ



ಸಂಶೋಧಕರು
ಎನ್. ಜಿ. ಅಂಬರೀಶ್

ಮಾರ್ಗದರ್ಶಕರು
ಡಾ. ಎಸ್. ಸಿ. ಪಾಟೀಲ
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ದೃಶ್ಯಕಲಾ ವಿಭಾಗ
ಡೀನ್, ಲಲಿತಕಲಾ ನಿಕಾಯ





ಲಲಿತಕಲಾ ನಿಕಾಯ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬
೨೦೧೨

# ಕರ್ನಾಟಕದ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆ

ಬೆಂಗಳೂರು, ಮೈಸೂರು, ಬೆಳಗಾಂವಿ, ಗುಲ್ಬರ್ಗಾ, ವಿಭಾಗಗಳ ಆಯ್ದು ನಮೂನೆಗಳ ಅಧ್ಯಯನ

ಎಂ.ಫಿಲ್ ಪದವಿಗಾಗಿ ದೃಶ್ಯಕಲಾ ವಿಭಾಗ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಕಿರು ಸಂಶೋಧನಾ ಪ್ರಬಂಧ

ಸಂಶೋಧಕರು

**ಎನ್.ಜಿ.ಅಂಬರೀಶ್**

ಮಾರ್ಗದರ್ಶಕರು

**ಡಾ.ಎಸ್.ಸಿ.ಪಾಟೀಲ**

ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು

ದೃಶ್ಯಕಲಾ ವಿಭಾಗ

ಡೀನ್ ಲಲಿತಕಲಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ



**ದೃಶ್ಯಕಲಾ ವಿಭಾಗ**

ಲಲಿತಕಲಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೧೨

# ಪ್ರಮಾಣ ಪತ್ರ

**"ಕರ್ನಾಟಕದ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆ"** ಎಂಬ ಶೀರ್ಷಿಕೆಯ ಕಿರು ಸಂಶೋಧನಾ ಪ್ರಬಂಧವನ್ನು ಪ್ರಧ್ಯಾಪಕರಾದ ಡಾ.ಎಸ್.ಸಿ.ಪಾಟೀಲ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಈ ಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಎನ್.ಜಿ.ಅಂಬರೀಶ್
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ
ದಿನಾಂಕ :

# ದೃಢೀಕರಣ ಪತ್ರ

ಎನ್.ಜಿ.ಅಂಬರೀಶ್ ಇವರು ಬರೆದು ಸಾದರಪಡಿಸಿದ **"ಕರ್ನಾಟಕದ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆ"** ಎಂಬ ಶೀರ್ಷಿಕೆಯ ಸಂಶೋಧನಾ ಪ್ರಬಂಧವು ಮೂಲ ಸಂಶೋಧನಾ ಕೃತಿಯಾಗಿದ್ದು, ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಎಂ.ಫಿಲ್ ಪದವಿಗಾಗಿ ಈ ಕಿರು ಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಕಿರುಪ್ರಬಂಧ ಇಡಿಯಾಗಿ ಮತ್ತು ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಡಾ.ಎಸ್.ಸಿ.ಪಾಟೀಲ**
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ಸ್ಥಳ : ವಿದ್ಯಾರಣ್ಯ
ದಿನಾಂಕ : 13/7/2012

# ಕರ್ನಾಟಕದ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆ

## ಪರಿವಿಡಿ

ಅಧ್ಯಾಯ - ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

## ಪ್ರಸ್ತಾವನೆ

ನಮ್ಮ ರಾಜ್ಯವನ್ನು ಅನೇಕ ಮನೆತನಗಳು ಆಳ್ವಿಕೆಯನ್ನು ಮಾಡಿವೆ. ಪ್ರತಿಯೊಂದು ರಾಜಮನೆತದವರು ಕೂಡಾ ಚಿತ್ರ/ಶಿಲ್ಪ ಕಲೆಗೆ ತನ್ನದೇ ಆದ ವಿಶಿಷ್ಟವಾದಂತಹ ಕೊಡುಗೆಗಳನ್ನು ನೀಡುತ್ತಾ ಬಂದಿದ್ದಾರೆ. ಹಲವಾರು ರಾಜಮನೆತನಗಳು ತಮ್ಮ ಆಳ್ವಿಕೆಯ ಕಾಲದಲ್ಲಿ ಅನೇಕ ಸುಂದರ ಭಿತ್ತಿಚಿತ್ರ/ಶಿಲ್ಪಗಳ ಕೊಡುಗೆಯನ್ನು ನಮ್ಮ ರಾಜ್ಯಕ್ಕೆ ನೀಡಿದ್ದಾರೆ.

ಸಂಸ್ಕೃತಿಯನ್ನು ಅರಿಯಲು ಇರುವ ಆಕರಗಳಲ್ಲಿ ಚಿತ್ರಕಲೆಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಆ ದಿಸೆಯಲ್ಲಿ ಚಿತ್ರಕಲೆಯ ಮುಖಾಂತರ ಮಾನವನ ಸಂಸ್ಕೃತಿಯ ಒಂದು ಭಾಗವೇ ಆಗಿರುವ ಚಿತ್ರಕಲೆ ಇತರ ಆಕರಗಳಿಗಿಂತ ಬೇರೆಯಾಗಿ ಇದು ನಮ್ಮ ಸಾಂಸ್ಕೃತಿಕ ಇತಿಹಾಸವನ್ನು ಪುನರ್ ರಚಿಸಲು ಹೀಗೆ ಸಹಾಯ ಮಾಡುತ್ತದೆ ಎಂಬುವುದನ್ನು ಈ ಅಧ್ಯಯನದಲ್ಲಿ ಕಂಡುಕೊಳ್ಳಬಹುದಾಗಿದೆ.[೧]

ಲಲಿಕಲೆಗಳಲ್ಲಿ ಚಿತ್ರಕಲೆ ಮತ್ತು ಶಿಲ್ಪಗಳಿಗೆ ಗಮನಾರ್ಹ ಸ್ಥಾನವಿದೆ. ಆದರೆ ಇವು ಒಂದನ್ನು ಬಿಟ್ಟು ಇನ್ನೊಂದಿಲ್ಲ ಎನ್ನುವುದೂ ಅಷ್ಟೇ ಮುಖ್ಯವಾಗಿದೆ. ಚಿತ್ರ ಮತ್ತು ಶಿಲ್ಪಗಳನ್ನು ದೇವಾಲಯಗಳನ್ನು ಒಳಗೊಂಡಂತೆ ಎಲ್ಲಾ ರೀತಿಯ ಕಟ್ಟಡಗಳ ಅಲಂಕಾರಕ್ಕಾಗಿ ಉಪಯೋಗಿಸುತ್ತಿದ್ದುದರಿಂದ ಚಿತ್ರ ಮತ್ತು ಶಿಲ್ಪ ರಚನೆಯ ಸೂತ್ರಗಳು ವಾಸ್ತುಶಾಸ್ತ್ರದ ಒಂದು ಅಂಗವೇ ಆಗಿದ್ದವು. ವಿವಿಧ ಚಿತ್ರ ಮತ್ತು ಶಿಲ್ಪ ವಿಗ್ರಹಗಳನ್ನು ಬೇರೆ ಬೇರೆ ಭಾವ ಮತ್ತು ಭಂಗಿಗಳಲ್ಲಿ ಒಡಮೂಡಿಸಬೇಕಾದಾಗ ಸಹಜವಾಗಿ ಅದಕ್ಕೆ ಸಂಗೀತ ಮತ್ತು ನೃತ್ಯ. ಇವೆಲ್ಲವುಗಳ ಪರಸ್ಪರ ಪ್ರಭಾವಗಳ ಒಟ್ಟಾರೆ ಅಧ್ಯಯನವೆನಿಸಿತ್ತು. ಆದ್ದರಿಂದಲೇ ವಿಷ್ಣುಧರ್ಮೋತ್ತರ ಗ್ರಂಥದಲ್ಲಿ ಚಿತ್ರಕಲೆ ಗೊತ್ತಿಲ್ಲದವನು ವಿಗ್ರಹ ಲಕ್ಷಣಗಳನ್ನರಿಯಲಾರ, ನೃತ್ಯ ಗೊತ್ತಿಲ್ಲದವನು ಚಿತ್ರಕಲೆಯನ್ನು ತಿಳಿಯಲಾರ, ಸಂಗೀತ ಗೊತ್ತಿಲ್ಲದವನು ನೃತ್ಯವನ್ನು ಅರಿಯಲಾರ ಎಂದು ಸ್ಪಷ್ಟವಾಗಿ ಲಲಿತಕಲೆಗಳ ಪರಸ್ಪರ ಅವಲಂಬನೆಯನ್ನು ಸೂಚಿಸಲಾಗಿದೆ.[೨]

೧. ಡಾ.ಎಸ್.ಸಿ.ಪಾಟೀಲ: ವರ್ಣಸಂಚಯ ಪ್ರಸ್ತಾವನೆ, ಪುಟ-೧

೨. ಡಾ.ಎಸ್.ಸಿ.ಪಾಟೀಲ (ಸಂ) : ಚಿತ್ರಕಲೆ ಮತ್ತು ಪೂರಕ ಕ್ಷೇತ್ರಗಳು, ಪುಟ-೨೭

ಭಾರತೀಯ ಚಿತ್ರಕಲೆಯ ಪ್ರಾರಂಭದಿಂದ ನೋಡುತ್ತಾ ಬಂದರೆ ಕರ್ನಾಟಕದಲ್ಲಿ ರಚನೆಯಾದ ಭಿತ್ತಿಚಿತ್ರಗಳಿಗೆ ತನ್ನದೇ ಆದಂತಹ ವಿಶಿಷ್ಟ ಸ್ಥಾನಮಾನವಿದೆ. ಕನ್ನಡ ನಾಡಿನ ಜನತೆ ಭಿತ್ತಿಚಿತ್ರಗಳನ್ನು ರಚಿಸುವ ಮೂಲಕ ಕಲಾಕಾರರಾಗಿ ಭಿತ್ತಿಚಿತ್ರಗಳನ್ನು ರಚಿಸುವುದರೊಂದಿಗೆ ಕಲೆಯ ಪೋಷಕರಾಗಿದ್ದಾರೆ. ಈ ಭಿತ್ತಿಚಿತ್ರದ ರಚನೆಯ ಪರಂಪರೆಯನ್ನು ಜೀವಂತವಾಗಿರಿಸುವುದರ ಜೊತೆಗೆ ನಮ್ಮ ನಾಡನ್ನು ಸಂಪದ್ಭರಿತ ಪ್ರದೇಶವನ್ನಾಗಿ ಮಾಡಿದ್ದಾರೆ. ಹೀಗೆ ಈ ಭಿತ್ತಿಚಿತ್ರ ರಚನಾ ಪರಂಪರೆಯನ್ನು ಜೀವಂತವಾಗಿರಿಸುವುದರ ಮೂಲಕ ನಮ್ಮವರು ಇಂದಿನವರೆಗೂ ಉಳಿಸಿಕೊಂಡು ಬಂದಿರುವುದಲ್ಲದೇ ವ್ಯಕ್ತಿಯಿಂದ ವ್ಯಕ್ತಿಗೆ ಸಮುದಾಯದಿಂದ ಸಮುದಾಯಕ್ಕೆ ನವೀನತೆಯಿಂದ ಸೃಷ್ಟಿಗೊಂಡಿವೆ. ಪ್ರಾದೇಶಿಕವಾಗಿ ಆ ಪ್ರದೇಶದ ಜನರ ಜೀವನ ವಿಧಾನ, ಆಚಾರ, ವಿಚಾರ ಅವರವರ ಧರ್ಮಕ್ಕೆ ಇಟ್ಟಂತಹ ನಂಬಿಕೆ ಮುಂತಾದವುಗಳು ಅವರ ಭಿತ್ತಿಚಿತ್ರರಚನೆಯ ಮೇಲೆ ಪ್ರಭಾವ ಬೀರಿ ಈ ಪರಂಪರೆ ವೈವಿಧ್ಯಮಯವಾಗಿ ರೂಪುಗೊಳ್ಳಲು ಕಾರಣವಾಗಿದೆ. ಯಾವುದೇ ಕಾಲದ ಭಿತ್ತಿಚಿತ್ರಗಳು ಆಯಾ ಕಾಲದ ಜನಜೀವನ ವಿವರಗಳನ್ನು ಒಳಗೊಂಡಿರುತ್ತವೆ. ಹಾಗೆಯೇ ಧಾರ್ಮಿಕ, ರಾಜಕೀಯ, ಸಾಂಸ್ಕೃತಿಕ ಇತಿಹಾಸವನ್ನು ತಿಳಿಯಲು ಇವು ಮಹತ್ವವಾದ ಆಕರಗಳಾಗಿವೆ.

ಭಿತ್ತಿಚಿತ್ರ/ಶಿಲ್ಪಕಲೆಯ ಪರಂಪರೆಯನ್ನು ನಮ್ಮ ಪೂರ್ವಜರು ಧರ್ಮ ಪ್ರಚಾರದ ಸಾಧನವಾಗಿ, ಸಮಾಜವನ್ನು ರೂಪಿಸುವಲ್ಲಿ ಮನರಂಜನೆಗಾಗಿ, ವೈಯಕ್ತಿಕ ಭಾವನೆಗಳ ಕಲಾತ್ಮಕ ಅಭಿವ್ಯಕ್ತಿಗಾಗಿ, ರಾಜಕೀಯ ಉದ್ದೇಶಗಳಿಗಾಗಿ ಬಳಸಿಕೊಂಡರು ಎಂಬುವುದನ್ನು ನೋಡುವುದು. ಅದರ ಜೊತೆಗೆ ಭಿತ್ತಿಚಿತ್ರ/ಶಿಲ್ಪಗಳ ಶೈಲಿ ಕಾಲದಿಂದ ಕಾಲಕ್ಕೆ ಬದಲಾದ ಅವುಗಳ ಬಳಕೆ ಭಿತ್ತಿಚಿತ್ರ/ಶಿಲ್ಪಗಳ ಅಧ್ಯಯನದಿಂದ ಕಂಡುಬರುವ ಮಹತ್ವದ ಅಂಶಗಳಾಗಿವೆ. ಅಲ್ಲದೇ ಚಿತ್ರರಚನೆಯ ವಿಚಾರಗಳನ್ನು ತಿಳಿದುಕೊಳ್ಳಲು ಇದು ಪ್ರಮುಖವಾದ ಅಂಶವಾಗಿದೆ.

### ಅಧ್ಯಯನದ ಉದ್ದೇಶ

ಸಾಂಪ್ರದಾಯಿಕ ಚಿತ್ರಕಲೆ ನಿರಂತರವಾಗಿ ಬೆಳವಣಿಗೆಯನ್ನು ಹೊಂದುತ್ತಾ ತನ್ನದೇ ಆದಂತಹ ವಿಶಿಷ್ಟತೆಯನ್ನು ಮೂಡಿಸಿಕೊಂಡಿದೆ. ಆದರೆ ಇತ್ತೀಚ್ಚಿನ ಕಾಲಘಟ್ಟದ ಸಂದರ್ಭದಲ್ಲಿ ಸಾಂಪ್ರದಾಯಿಕ ಚಿತ್ರಕಲೆಗೆ ಅಷ್ಟೊಂದು ಪ್ರಾಧಾನ್ಯತೆ ಸಿಗದಂತಾಗಿದೆ. ಕಾರಣ ದೃಶ್ಯ ಮಾಧ್ಯಮಗಳ ಪ್ರಭಾವದಿಂದಾಗಿ ಭಿತ್ತಿಚಿತ್ರ/ಶಿಲ್ಪಕಲೆಯ ಪ್ರಧಾನ ಪಾತ್ರ ವಹಿಸುತ್ತಿದೆ. ಈ ಹಿನ್ನೆಲೆಯಲ್ಲಿ ಭಿತ್ತಿಚಿತ್ರ/ಶಿಲ್ಪಕಲೆಯ ವಿಶಿಷ್ಟತೆ ಪ್ರಭಾವ ಮತ್ತು ಅದರ ಅಸ್ಮಿತೆ ಕುರಿತು ವಿವಿಧ ಆಯಾಮಗಳ ಮೂಲಕ ಕಲಾ ಸೃಷ್ಟಿಯಾಗಿ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ಸಮಕಾಲೀನ ಸಂದರ್ಭದಲ್ಲಿ ಕಲಾವಿದರು ಭಿತ್ತಿಚಿತ್ರ ಶಿಲ್ಪಗಳನ್ನು ರಚನೆ ಮಾಡುವ ವಿಧಾನವನ್ನು ಮುಂದಿನ ಜನಸಮೂಹಕ್ಕೆ ಕಲಾವಿದರಿಗೆ ಮುಂದಿನ ಪೀಳಿಗೆಗೆ ತಿಳಿಸುವ ಉದ್ದೇಶದಿಂದ ಆಧುನಿಕ ಭಿತ್ತಿಚಿತ್ರ

ಶಿಲ್ಪಕಲೆಯ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಇಲ್ಲಿ ಕಲಾವಿದನು ತೆಗೆದುಕೊಂಡ ವಸ್ತು ವಿಷಯ, ಪ್ರಭಾವ ಪ್ರೇರಣೆ, ಶೈಲಿ, ತಂತ್ರಗಾರಿಕೆಯನ್ನು ಕುರಿತ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ಕರ್ನಾಟಕದ ಆಧುನಿಕ ಭಿತ್ತಿಚಿತ್ರ/ಶಿಲ್ಪಗಳ ಬಗ್ಗೆ ಅಷ್ಟಾಗಿ ಸಂಶೋಧನೆಗಳು ನಡೆಯದಿರುವುದು ಕಂಡು ಬರುತ್ತದೆ. ಹಾಗೂ ಕರ್ನಾಟಕದಲ್ಲಿ ಪ್ರಸಿದ್ಧ ಪಡೆದಿರುವಂತಹ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆಯ ಕಲಾವಿದರು ರಚಿಸಿರುವ ವಿವಿಧ ಮಾಧ್ಯಮಗಳ ಬಗ್ಗೆ ಒಟ್ಟಾರೆಯಾಗಿ ಸಂಶೋಧನೆಯನ್ನು ಮಾಡುವ ಉದ್ದೇಶ ಹೊಂದಲಾಗಿದೆ. ಭಿತ್ತಿಚಿತ್ರ/ಶಿಲ್ಪಕಲೆಯನ್ನು ಹಲವಾರು ಕಲಾ ಆಸಕ್ತರಿಗೆ, ಕಲಾ ಅಭಿಮಾನಿಗಳಿಗೆ ಮತ್ತು ವಿಶೇಷವಾಗಿ ಕಲಾಶಾಲೆಗಳಲ್ಲಿ ವಿದ್ಯಾರ್ಥಿಗಳ ಮುಂದಿನ ಬದುಕಿಗಾಗಿ ಸಹಾಯಕವಾಗುವ ನಿಟ್ಟಿನಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಅಧ್ಯಯನದ ವಸ್ತುವಾಗುವುದಕ್ಕೆ ಏನಾದರೊಂದು ವಿಶೇಷತೆ ಇರಬೇಕಾಗುತ್ತದೆ. ಹಾಗೆಯೇ ಆಸಕ್ತಿ ಅಭಿರುಚಿ ಬೆಳೆಸಿಕೊಂಡವರು ಆ ಕ್ಷೇತ್ರದಲ್ಲಿನ ಸಾಧನೆ ಮೌಲ್ಯ ವೈಶಿಷ್ಟ್ಯತೆಗಳನ್ನು ತಿಳಿದುಕೊಳ್ಳುವ ಹಂಬಲವನ್ನು ಹೊಂದಿರಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆ ಎಂಬ ವಿಷಯವನ್ನು ಅಧ್ಯಯನ ನಡೆಸಲು ಉದ್ದೇಶಿಸಲಾಗಿದೆ.

ಕರ್ನಾಟಕದಲ್ಲಿ ದೃಶ್ಯಕಲೆಯ ಕ್ಷೇತ್ರದಲ್ಲಿ ಇನ್ನು ಅನೇಕ ವಿಷಯಗಳು ಅಧ್ಯಯನಕ್ಕಾಗಿ ಕಾಯ್ದುಕುಳಿತಿವೆ. ಇತ್ತೀಚಿನ ದಿನಗಳಲ್ಲಿ ತುಂಬಾ ಗಂಭೀರವಾಗಿ ಈ ಕ್ಷೇತ್ರದಲ್ಲಿ ಅಧ್ಯಯನಗಳು ನಡೆಯುತ್ತಿದ್ದು, ಯಾವುದೇ ವಿಷಯವನ್ನು ಅಧ್ಯಯನ ಮಾಡುವ ಮುನ್ನ ಅದರ ಮೂಲಕ ಉದ್ದೇಶವೇನು? ಅಧ್ಯಯನ ಯಾವ ಸ್ವರೂಪದಲ್ಲಿರಬೇಕು? ಹಾಗೂ ಯಾವ ವಿಧಾನದಲ್ಲಿ ಅಧ್ಯಯನ ಕೈಗೊಳ್ಳಬಹುದು ಎಂಬುದು ಮುಖ್ಯವಾಗುತ್ತದೆ. ಇದರ ಆಧಾರದ ಮೇಲೆ ವಿಷಯ ವಿಂಗಡನೆ ಮಾಡುತ್ತಾ ಹೋದರೆ ಅದು ಪೂರ್ಣವಾದಿತು ಎಂಬ ಪ್ರಜ್ಞಾಪೂರ್ವಕ ಚೌಕಟ್ಟನ್ನು ಗಮನದಲ್ಲಿಟ್ಟುಕೊಂಡು ಪ್ರಸ್ತುತ ಅಧ್ಯಯನವನ್ನು ವಸ್ತುನಿಷ್ಠವಾಗಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

ನಮ್ಮ ಕಣ್ಣೆದುರಿಗೆ ಇರುವ ಎಷ್ಟೋ ವಸ್ತುಗಳು ವ್ಯಕ್ತಿಗಳ ಸಾಧನೆ ಐತಿಹಾಸಿಕ ವಿಶೇಷತೆ ನಮಗೆ ಗೊತ್ತಿರುವುದಿಲ್ಲ. ಹಾಗಾಗಿ ನಮ್ಮ ಸಮಾಜದಲ್ಲಿನ ವಿಶಿಷ್ಟ ಸ್ಥಳ ವ್ಯಕ್ತಿ ವಸ್ತುವಿನ ಬಗ್ಗೆ ನಾವು ಕ್ರಿಯಾಶೀಲತೆ ಪ್ರಾಮಾಣಿಕವಾಗಿ ಬದ್ಧತೆಯಿಂದ ಅಧ್ಯಯನ ನಡೆಸುವುದರ ಮೂಲಕ ಜನಸಾಮಾನ್ಯರಿಗೆ ಸಮಾಜಕ್ಕೆ ಹಾಗೂ ನಾಡಿಗೆ ಪರಿಚಯಿಸುವ ಕೆಲಸವನ್ನು ಮಾಡಬೇಕಾಗುತ್ತದೆ. ಈ ನಿಟ್ಟಿನಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಭಿತ್ತಿಚಿತ್ರ/ಶಿಲ್ಪಕಲೆಯನ್ನು ನಮ್ಮ ಪೂರ್ವಜರು ಧರ್ಮಪ್ರಚಾರದ ಸಾಧನವಾಗಿ ಮಾಡಿಕೊಂಡರೆ ಆಧುನಿಕ ಯುಗದಲ್ಲಿ ಜನರು ಹೆಚ್ಚಾಗಿ ಸೌಂದರ್ಯಕ್ಕಾಗಿ ಕಲಾವಿದ ತನ್ನಲ್ಲಿರುವ ಹೊಸತನವನ್ನು ಭಿತ್ತಿಚಿತ್ರ ಮತ್ತು ಶಿಲ್ಪ ಕಲೆಗಳನ್ನು ರಚಿಸುವ ಮೂಲಕ ಸಮಾಜಕ್ಕೆ ತಿಳಿಸಲು ಪ್ರಯತ್ನಿಸುತ್ತಾನೆ. ಈ ನಿಟ್ಟಿನಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಕರ್ನಾಟಕದಲ್ಲಿ ಭಿತ್ತಿಚಿತ್ರಕಲೆಯ ಬಗ್ಗೆ ಇದುವರೆಗೆ ನಡೆದ ಅಧ್ಯಯನದ ಸ್ಥೂಲ ಸಮೀಕ್ಷೆ.**

ಶ್ರೀರಂಗಪಟ್ಟಣದ ದರಿಯಾದೌಲತ್ ಚಿತ್ರಗಳ ಬಗ್ಗೆ ೧೮೧೦ರಲ್ಲಿ ವಿಲ್ಕ್ ಎಂಬುವವರು ಬರೆದಿದ್ದು, ಅದನ್ನಾಧರಿಸಿ ೧೯೩೨ರಲ್ಲಿ ಮತ್ತೆ ಅವರು ಪುಸ್ತಕವೊಂದನ್ನು ಬರೆದಿದ್ದಾರೆ. ಅದರಲ್ಲಿ ಅಲ್ಲಿಯ ಭಿತ್ತಿಚಿತ್ರಗಳ ವಿಷಯ ವರ್ಗಸಂಯೋಜನೆ ಕುರಿತು ಹೇಳಲಾಗಿದೆ. ೧೮೪೧ರಲ್ಲಿ ಜಾನ್ ವಿಲ್ಸನ್ ಅವರು ಬಾದಾಮಿಯ ಭಿತ್ತಿಚಿತ್ರಗಳ ಬಗ್ಗೆ ಬರೆದಿದ್ದಾರೆ. ಅವರು ತಮಗಿಂತ ಪೂರ್ವದಲ್ಲಿ ೧೮೧೮ರಲ್ಲಿಯೇ ಥಾಮಸ್ ಮನ್ರೊ ಎಂಬುವವರು ಬಾದಾಮಿ ವೈಷ್ಣವ ಗುಹಾಲಯದ ಭಿತ್ತಿಚಿತ್ರಗಳ ಬಗ್ಗೆ ಹೇಳಿದ್ದನ್ನು ಉಲ್ಲೇಖಿಸುತ್ತಾರೆ. ಕ್ರಿ.ಶ.೧೮೦೦ರ ಸುಮಾರಿಗೆ ಫ್ರಾನ್ಸಿಸ್ ಬುಕಾನ್‌ನ್ನು ಭಾರತದ ಪ್ರವಾಸಕ್ಕೆಗೊಂಡಿದ್ದು, ಆತ ಕರ್ನಾಟಕದಲ್ಲಿ ಸಂಚರಿಸುವಾಗ ತಾನು ಶ್ರೀರಂಗಪಟ್ಟಣದ ದಲಿಯಾ ದೌಲತ್‌ನಲ್ಲಿ ಕಂಡ ಚಿತ್ರಗಳ ಕುರಿತಾಗಿ ತನ್ನ ಪ್ರವಾಸ ಕಥನದಲ್ಲಿ ಬರೆದಿದ್ದಾರೆ. ಅಲ್ಲದೆ ಅಲ್ಲಿನ ಗೋಡೆಯ ಮೇಲೆ ಚಿತ್ರಿತವಾಗಿರುವ ಸ್ತ್ರೀ ಪುರುಷ ಹಾಗೂ ಮಗುವಿನ ಚಿತ್ರಗಳನ್ನು ಸ್ಥಳೀಯ ಚಿತ್ರಕಾರರಿಂದ ಬರೆಸಿ ತನ್ನ ಕೃತಿಯಲ್ಲಿ ಅಳವಡಿಸಿದ್ದಾನೆ. ೧೮೭೨ರಲ್ಲಿ ಬೌರಿಂಗ್ ಅವರು ಶ್ರೀರಂಗಪಟ್ಟಣದ ದರಿಯಾದೌಲತ್‌ನಲ್ಲಿರುವ ಭಿತ್ತಿಚಿತ್ರಗಳ ಬಗ್ಗೆ ವಿವರವಾಗಿ ಬರೆದು ಅವುಗಳ ವಸ್ತುವಿಷಯ ವರ್ಣಗಾರಿಕೆ ಸಂಯೋಜನೆ ಮುಂತಾದ ಸಂಗತಿಗಳನ್ನು ತಿಳಿಸುತ್ತಾರೆ.[೩]

೧೯೨೪ರಲ್ಲಿ ಕರ್ನಾಟಕ ಕುರಿತು ಕೈಪಿಡಿಯಲ್ಲಿ[೪] ಅಜಂತದಲ್ಲಿ ಎರಡನೆ ಪುಲಿಕೇಶಿಯಿಂದ ಭಿತ್ತಿಚಿತ್ರ ಬರೆಯಲ್ಪಟ್ಟ ಮತ್ತು ಬಿಜಾಪುರದಲ್ಲಿ ಮೊಗಲ್ ಶೈಲಿಯ ಚಿತ್ರಗಳು ರಚನೆಯಾದ ಕುರಿತು ಮಾಹಿತಿ ಇದೆ. ೧೯೩೧ರಲ್ಲಿ ಸಿ.ಇ.ಪಾರಸನ್ಸ್ ಇವರು[೫] ಶ್ರೀರಂಗಪಟ್ಟಣದ ಬಗ್ಗೆ ಕಿರುಪುಸ್ತಕ ಕೈಪಿಡಿ ಒಂದನ್ನು ಬರೆದಿದ್ದು. ಅದರಲ್ಲಿ ದರಿಯಾದೌಲತ್ ಅರಮನೆಯ ಭಿತ್ತಿಚಿತ್ರಗಳ ಕುರಿತಾಗಿ ವಿವರಣೆ ಕೊಟ್ಟಿದ್ದಾರೆ. ೧೯೪೦ರಲ್ಲಿ ಎಂ.ಎಚ್.ಕೃಷ್ಣರವರು[೬] ಶ್ರವಣಬೆಳಗೋಳದ ಬಗ್ಗೆ ಒಂದು ಕಿರುಪುಸ್ತಕ ರಚಿಸಿದ್ದು ಅದರಲ್ಲಿ ಅಲ್ಲಿಯ ಭಿತ್ತಿಚಿತ್ರಗಳ ವಿವರಣೆ ಇವೆ.

೧೯೨೭ರಲ್ಲಿ ಪ್ರಕಟವಾದ ಭಾರತದ ಚಿತ್ರಕಲೆ ಪುಸ್ತಕದಲ್ಲಿ ಪಿ.ಆರ್.ತಿಪ್ಪೇಸ್ವಾಮಿಯವರು[೭] ಅಜಂತ ಎಲ್ಲೋರಾ ಬಾದಾಮಿ ಭಿತ್ತಿಚಿತ್ರದ ಬೆಳೆದುಬಂದ ವಿವರಗಳನ್ನು ಸಾಂದರ್ಭಿಕವಾಗಿ ಉಲ್ಲೇಖಿಸಿದ್ದಾರೆ. ೧೯೭೮ರಲ್ಲಿ ಕರ್ನಾಟಕ ಸಾಂಸ್ಕೃತಿಕ ಅಧ್ಯಯನ ಎಂಬ ಪುಸ್ತಕದಲ್ಲಿ ಡಾ.ಎಚ್.ತಿಪ್ಪೇರುದ್ರಸ್ವಾಮಿಯವರು[೮] ಕರ್ನಾಟಕದ ಭಿತ್ತಿಚಿತ್ರ ಪರಂಪರೆಯನ್ನು ಬಾದಾಮಿ ಚಾಲುಕ್ಯರಿಂದ ಮೈಸೂರು ಅರಸರವರೆಗೆ ಕೆಲವು ಚಿತ್ರದ ನೆಲೆಗಳನ್ನು ಉದಾಹರಿಸುತ್ತ ಚರ್ಚಿಸಿದ್ದಾರೆ.

---

೩. ಯಾದಪ್ಪ ಬಿ.ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಒಂದು ಅಧ್ಯಯನ, ಅಪ್ರಕಟಿತ ಪಿಹೆಚ್ ಮಹಾಪ್ರಬಂಧ, ಕ.ವಿ.ವಿ, ಹಂಪಿ, ಪುಟ-೧೧

4. D.K.Bharadvaj (Ed.,), painting karnataka Hand Book, Mysore, page-14

5. Constance E. Parsons, Seringapatanm Madras, page-37

6. M.H.Krishana, A Guide to Shravana, Balagola, page-16

೭. ಪಿ.ಆರ್.ತಿಪ್ಪೇಸ್ವಾಮಿ : ಬೆಳೆದುಬಂದ ಭಾರತದ ಚಿತ್ರಕಲೆ, ೧೯೭೨, ಪುಟ-೪೦

೮. ಡಾ.ಎಚ್.ತಿಪ್ಪೇರುದ್ರಸ್ವಾಮಿ : ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಮೈಸೂರು, ೧೯೭೮, ಪುಟ-೭೭

೧೯೭೦ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಪ್ರಕಟಗೊಂಡ ಡಾ.ಎಂ.ಚಿದಾನಂದ ಮೂರ್ತಿಯವರ್[೯] ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಎಂಬ ಪುಸ್ತಕದಲ್ಲಿ ಅವರು ಶಾಸನಗಳಲ್ಲಿ ಬರುವ ಭಿತ್ತಿಚಿತ್ರಗಳ ಉಲ್ಲೇಖನಗಳನ್ನು ಹೇಳುತ್ತಾರೆ. ಅವುಗಳಲ್ಲದೆ ೧೯೭೦ರಲ್ಲಿ ಆ.ನ.ಕೃಷ್ಣರಾಯರ[೧೦] ಚಿತ್ರಕಲೆ ಎಸ್.ಎಂ.ಶಿರಹಟ್ಟಿಯವರ[೧೧] ಚಿತ್ರಕಲಾ ಕೈದೀಪಾ ಕೃತಿಗಳು ಪ್ರಕಟವಾಗಿದ್ದು, ಇವುಗಳಲ್ಲಿ ಭಿತ್ತಿಚಿತ್ರಗಳ ಸಂಕ್ಷಿಪ್ತ ಮಾಹಿತಿ ದೊರೆಯುತ್ತದೆ.

೧೯೭೫ರಲ್ಲಿ ಪ್ರಕಟಗೊಂಡ ಭಾರತೀಯ ಸಂಸ್ಕೃತಿ ಕೃತಿಯಲ್ಲಿ ಎಸ್.ಶ್ರೀಕಂಠ ಶಾಸ್ತ್ರಿಗಳು[೧೨] ಭಿತ್ತಿಚಿತ್ರಕಲೆಯ ಬಗ್ಗೆ ಸಾಂದರ್ಭಿಕವಾಗಿ ಚರ್ಚಿಸುತ್ತಾರೆ. ೧೯೭೮ರಲ್ಲಿ ಪ್ರಕಟವಾದ "ದಿ ಚಾಲುಕ್ಯ ಆಫ್ ಬಾದಾಮಿ" ಕೃತಿಯಲ್ಲಿ ಎಮ್.ಎಸ್.ನಾಗರಾಜರಾವ್[೧೩] ಅವರು ಬಾದಾಮಿ ವೈಷ್ಣವ ಗುಹೆಯ ಭಿತ್ತಿಚಿತ್ರಗಳಿದ್ದುವಲ್ಲದೇ ಚಿತ್ರಗಳಿರದ ಸ್ಥಳವನ್ನು ಬಣ್ಣ ಲೇಪಿಸಿ ಅಲಂಕರಿಸಲಾಗಿತ್ತು ಹೀಗೆ ಇಡೀ ಗುಹೆ ವರ್ಣ ಮತ್ತು ವರ್ಣಚಿತ್ರಗಳಿಂದ ಅಲಂಕರಿಸಲ್ಪಟ್ಟಿತ್ತು ಎಂದು ಹೇಳುತ್ತಾರೆ.

೧೯೭೯ರಲ್ಲಿ ಎಮ್.ಎಸ್.ನಾಗರಾಜರಾವ್ ಅವರ ಭಾರತೀಯ ಕಲೆಗಳಲ್ಲಿ ಕಿರಾತಾರ್ಜುನೀಯ ಪ್ರಸಂಗ ಕೃತಿಯಲ್ಲಿ ಭಾರತೀಯ ಶಿಲ್ಪ ಮತ್ತು ಭಿತ್ತಿಚಿತ್ರಗಳಲ್ಲಿ ರಚನೆಯಾಗಿರುವ ಕಿರಾತಾರ್ಜುನಿಯ ಪ್ರಸಂಗಗಳ ಕುರಿತು ತೌಲನಿಕ ಚರ್ಚೆ ಇದೆ. ೧೯೭೯ರಲ್ಲಿ ಟಿ.ಪಿ.ಬಾಯಿರಿ[೧೪] ಅವರ ಭಾರತೀಯ ಚಿತ್ರಕಲೆಯಲ್ಲಿ ಬಾದಾಮಿ ಭಿತ್ತಿಚಿತ್ರಗಳ ಬಗ್ಗೆ ಕಿರು ಮಾಹಿತಿ ಇದೆ.

೧೯೮೦ರಲ್ಲಿ ಕರ್ನಾಟಕದ ಸಂಪ್ರದಾಯ ಚಿತ್ರಗಳು ಎಂಬ ಕೃತಿಯನ್ನು ಎಸ್.ಆರ್.ರಾವ್ ಮತ್ತು ಬಿ.ವಿ.ಕೆ.ಶಾಸ್ತ್ರಿ ಅವರು ಕೂಡ ರಚಿಸಿದ್ದು[೧೫] ಅದರಲ್ಲಿ ಭಿತ್ತಿಚಿತ್ರಗಳ ಬಗ್ಗೆಮಾಹಿತಿ ಇದೆ. ಎಸ್.ಕೆ.ರಾಮಚಂದ್ರರಾವ್ ಅವರ ಸಂಪಾದಕತ್ವದ ಕರ್ನಾಟಕದ ಕಲೆಗಳು ಸಂಪುಟ ೧ ಮತ್ತು ೩ರಲ್ಲಿ[೧೬] ಭಿತ್ತಿಸಿದ್ದತಾ ವಿಧಾನ ಚಿತ್ರ ರಚನಾ ಕ್ರಮಗಳ ಕುರಿತು ವಿವರಣೆ ಇದೆ.

೧೯೮೨ರಲ್ಲಿ ಆರ್.ಎನ್.ಸಾಲತ್ತೊರೆ ಅವರು[೧೭] ವಿಜಯನಗರ ಕಲೆ ಬಗ್ಗೆ ಬರೆದಿದ್ದು, ಅದರಲ್ಲಿ ಭಿತ್ತಿಚಿತ್ರಗಳ ಭಿತ್ತಿ ವಸ್ತು ವಿಷಯವನ್ನು ಹೇಳುತ್ತಾರೆ. ೧೯೮೩ರಲ್ಲಿ ಗದಗ ತೋಂಟದಾರ್ಯ ಮಠದಿಂದ ಪ್ರಕಟವಾದ ಡಾ.ಪಿ.ವಿ.ನಾರಾಯಣ ಅವರ್[೧೮] ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ ಎಂಬ ಗ್ರಂಥ ವಚನಗಳಲ್ಲಿ ಉಲ್ಲೇಖಗೊಂಡಿರುವ ಭಿತ್ತಿ ಚಿತ್ರದ ಪ್ರಸ್ತಾಪವಿದೆ.

---

೯. ಡಾ.ಎಂ.ಚಿದನಾಂದ ಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ-೭೨

೧೦. ಅ.ನ.ಕೃಷ್ಣರಾಯ ಚಿತ್ರಕಲೆ : ಎಚ್.ವೆಂಕಟರಾಮಯ್ಯ ಆ್ಯಂಡ್ ಸನ್ಸ್, ಮೈಸೂರು, ಪುಟ-೩೦

೧೧. ಎಸ್.ಎಂ.ಶಿರಹಟ್ಟಿ : ಚಿತ್ರಕಲಾ ಕೈ ದೀಪ, ಪಿಹಾಮಿ ಪಬ್ಲಿಕೇಶನ್, ಗದಗ, ಪುಟ-೧೬

೧೨. ಎಸ್.ಶ್ರೀಕಂಠಶಾಸ್ತ್ರಿ : ಭಾರತೀಯ ಸಂಸ್ಕೃತಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ-೧೮

13. M.S.Nagaraj Rao : The Chalukya of Badami, Bangalore, page-49

೧೪. ಬಿ.ಪಿ.ಬಾಯಿರಿ : ಭಾರತೀಯ ಚಿತ್ರಕಲೆ, ಪ್ರತಿಭಾ ಗ್ರಂಥಮಾಲೆ, ಧಾರವಾಡ, ಪುಟ-೩೧

15. S.R.Rao, B.V.K.Shastry : Traditinal Painting of Karnataka, CKP, Bangalore, page-60

೧೬. ಎಸ್,ಕೆ.ರಾಮಚಂದ್ರರಾವ್ :ಕರ್ನಾಟಕದ ಕಲೆಗಳು(ಸಂಪುಟ-೧) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪುಟ-೩೨

17. R.N.Saletore : Vijayanagara Art, Delhi

೧೮. ಡಾ.ಪಿ.ವಿ.ನಾರಾಯಣ : ವಚನ ಸಾಹಿತ್ಯ ಒಂದು ಸಾಂಸ್ಕೃತಿಕ ಅಧ್ಯಯನ ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ತೋಂಟದಾರ್ಯಮಠ, ಗದಗ, ಪುಟ-೪೨

೧೯೮೩ರಲ್ಲಿ ಪ್ರಕಟವಾದ ಸಂಪ್ರದಾಯ ಶಿಲ್ಪಕಲೆ ಮತ್ತು ಚಿತ್ರಕಲೆ ಪುಸ್ತಕದಲ್ಲಿ ಎಸ್.ಕೆ.ರಾಮಚಂದ್ರಾವ್ ಅವರು[೧೯] ನಗ್ನಜೀವನ ಚಿತ್ರ ಲಕ್ಷಣ ಅಲ್ಲದೆ. ವಿಷ್ಣುಧರ್ಮೋತ್ತರ ಗ್ರಂಥ ವಿದ್ಯಾರಣ್ಯರ ಪಂಚದಂ ಕೃತಿಯಲ್ಲಿ ಭಿತ್ತಿಚಿತ್ರರಚನಾ ಹಂತಗಳನ್ನು ಚರ್ಚಿಸಿದ್ದಾರೆ. ೧೯೮೩ರಲ್ಲಿ ಬಿ.ವಿ.ಕೆ.ಶಾಸ್ತ್ರೀಯವರ[೨೦] ಕರ್ನಾಟಕದ ಭಿತ್ತಿಚಿತ್ರಗಳು ಎಂಬ ಕೃತಿ ಪ್ರಕಟವಾಗಿದ್ದು ಅದರಲ್ಲಿ ಬಾದಾಮಿ, ಹಂಪಿ, ಮೈಸೂರು, ಹರಪನಹಳ್ಳಿ ಶ್ರವಣಬೆಳಗೋಳ, ಮುಡುರುತೊರೆ, ಮುಂತಾದ ಸ್ಥಳಗಳ ಭಿತ್ತಿಚಿತ್ರಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳಿದ್ದಾರೆ.

೧೯೮೫ರಲ್ಲಿ ಶಿವರಾಮಮೂರ್ತಿಯವರ[೨೧] ವಿಜಯನಗರ ಪೇಂಟಿಂಗ್ಸ್ ಕೃತಿಯಲ್ಲಿ ಹಂಪಿಯ ವಿರೂಪಾಕ್ಷ ದೇವಾಲಯದ ಮಂಟಪದ ಚಿತ್ರಗಳು ಲೇಪಾಕ್ಷಿಯ ಚಿತ್ರಗಳ ಕುರಿತು ಮಾಹಿತಿ ಇದೆ. ೧೯೮೫ರಲ್ಲಿ ಪ್ರಕಟವಾದ ವಿ.ಸೀತಾರಾಮಯ್ಯನವರ[೨೨] ಸಾಹಿತ್ಯ ಮತ್ತು ಚಿತ್ರಕಲೆ ಸಾಹಿತ್ಯದಲ್ಲಿ ಸಾಂದರ್ಭಿಕವಾಗಿ ಬರುವ ಭಿತ್ತಿಚಿತ್ರ ಕಲೆಯ ಕುರಿತು ವಿವರವಿದೆ. ೧೯೮೮ರಲ್ಲಿ ಡಾ.ರಾಜಶೇಖರ್[೨೩] ಅವರು ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ ಎಂಬ ಕೃತಿಯಲ್ಲಿ ಬಾದಾಮಿಯ ವೈಷ್ಣವ ಗುಹಾಲಯದ ಭಿತ್ತಿಚಿತ್ರಗಳು ಮತ್ತು ಹಂಪಿಯ ವಿರೂಪಾಕ್ಷ ದೇವಾಲಯದ ಭಿತ್ತಿಚಿತ್ರಗಳ ಬಗ್ಗೆ ಮಾಹಿತಿ ಕೊಟ್ಟಿದ್ದಾರೆ. ಅಲ್ಲದೆ ಹಂಪೆಯ ವಿರೂಪಾಕ್ಷ ದೇವಾಲಯದ ಚಿತ್ರಗಳ ರಚನೆಯ ಕಾಲ ವಿಚಾರವಾಗಿ ದೀರ್ಘ ಚರ್ಚೆ ಮಾಡಿದ್ದಾರೆ.

೧೯೮೯ರಲ್ಲಿ ಪ್ರಕಟವಾದ ಎಂ.ಎಚ್.ಕೃಷ್ಣ[೨೪] ಮತ್ತು ೧೯೮೯ರಲ್ಲಿ ಎನ್.ಮರಿಶಾಮಾಚಾರ್ ಅವರು[೨೫] ಸಾಹಿತ್ಯದಲ್ಲಿ ಚಿತ್ರಕಲೆ ಎಂಬ ಕೃತಿಯಲ್ಲಿ ಭಿತ್ತಿಚಿತ್ರದ ಮಾಹಿತಿ ಇದೆ. ೧೯೯೪ರಲ್ಲಿ ಪಿ.ಆರ್.ತಿಪ್ಪೇಸ್ವಾಮಿ ಅವರು ಕರ್ನಾಟಕದ ಲಲಿತಕಲಾ ಆಕಾಡೆಮಿಯ ಕಲಾಕೋಶವನ್ನು ಪ್ರಕಟಿಸಿದ್ದು[೨೬] ಅದರಲ್ಲಿ ಭಿತ್ತಿಚಿತ್ರಗಳ ನೆಲೆಗಳ ಮಾಹಿತಿ ಇದೆ. ೧೯೯೫ರಲ್ಲಿ ಜಿ.ಅಂದಾನಿಯವರು[೨೭] 'ಬೀದರ್ ಇಟ್ಸ್ ಹಿಸ್ಟರಿ ಆ್ಯಂಡ್ ಮಾನ್ಯುಮೆಂಟ್ಸ್' ಎಂಬ ಕೃತಿಯಲ್ಲಿ ಬೀದರ್ ಸಮೀಪದ ಅಸ್ತೂರಿನ ಭಿತ್ತಿಚಿತ್ರಗಳ ಕುರಿತಾದ ಮಾಹಿತಿ ಇದೆ. ೧೯೯೫ರಲ್ಲಿ ಬಸವರಾಜ ಉಪ್ಪಿನ[೨೮] ಅವರು ಮಾನಯ್ಯ ಗರುಡಾದ್ರಿ ಎಂಬ ಕಿರು ಪುಸ್ತಕ ರಚಿಸಿದ್ದು ಅದರಲ್ಲಿ ಸಾಂದರ್ಭಿಕವಾಗಿ ಸುರಪುರದ ಭಿತ್ತಿಚಿತ್ರಗಳ ಬಗೆಗೆ ಹೇಳಲಾಗಿದೆ.

---

೧೯. ಎಸ್.ಕೆ.ರಾಮಚಂದ್ರರಾವ್ : ಸಂಪ್ರದಾಯ ಶಿಲ್ಪಕಲೆ ಮತ್ತು ಚಿತ್ರಕಲೆ : ಶಿಲ್ಪಕಲಾ ಪ್ರತಿಷ್ಠಾನ, ಬೆಂಗಳೂರು, ೧೯೮೩, ಪುಟ-೧೬

೨೦. ಬಿ.ವಿ.ಕೆ.ಶಾಸ್ತ್ರಿ, ಕರ್ನಾಟಕದ ಭಿತ್ತಿಚಿತ್ರಗಳು, ಕರ್ನಾಟಕ ಲಲಿಕಲಾ ಆಕಾಡೆಮಿ, ಬೆಂಗಳೂರು, ೧೯೮೩, ಪುಟ-೪೦

21. C.Sivaramamurti : Vijayanagara Painting, Delhi, 1985

೨೨. ವಿ.ಸೀತಾರಾಮಯ್ಯ : ಸಾಹಿತ್ಯ ಮತ್ತು ಚಿತ್ರಕಲೆ, ರಾಘವ ಪ್ರಕಾಶನ, ಬೆಂಗಳೂರು, ೧೯೮೫, ಪುಟ-೨೬

೨೩. ಸಿಂದಗಿ ರಾಜಶೇಖರ್ : ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ, ಸುಜಾತ ಪಬ್ಲಿಕೇಷನ್, ಧಾರವಾಡ, ೧೯೮೮, ಪುಟ-೩೨

೨೪. ಎಂ.ಎಚ್.ಕೃಷ್ಣಯ್ಯ : ಶೃಂಗಾರ ಲಹರಿ, ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು, ೧೯೮೯, ಪುಟ-೧೪

೨೫. ಎನ್.ಮರಿಶಾಮಾಚಾರ್ : ಸಾಹಿತ್ಯದಲ್ಲಿ ಚಿತ್ರಕಲೆ, ಸಿ.ಎಂ.ಎನ್.ಪ್ರಕಾಶನ, ಬೆಂಗಳೂರು, ೧೯೮೯, ಪುಟ-೯

೨೬. ಪಿ.ಆರ್.ತಿಪ್ಪೇಸ್ವಾಮಿ (ಸಂ) : ಕಲಾಕೋಶ, ಕರ್ನಾಟಕ ಲಲಿತಕಲಾ ಆಕಾಡೆಮಿ, ಬೆಂಗಳೂರು, ೧೯೯೪, ಪುಟ-೮೬

27. V.G.Anadani Bidar : It's History and Monuments Motilas, Banarasiday Publishers Private Limited, Dehli, 1995, page-42

೨೮. ಬಸವರಾಜ ಉಪ್ಪಿನ : ಬಾನಯ್ಯಗರುಡಾದ್ರಿ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು, ೧೯೯೫, ಪುಟ-೧೬

೧೯೯೮ರಲ್ಲಿ ಕೊಪ್ಪಳ ಸಾಂಸ್ಕೃತಿಕ ಪರಂಪರೆ ಎಂಬ ಕೃತಿಯನ್ನು ಬಿ.ಸಿ.ಪಾಟೀಲ್[೨೯] ಅವರು ರಚಿಸಿದ್ದು, ಅದರಲ್ಲಿ ಕೊಪ್ಪಳ ಪರಿಸರದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ಬಗೆಗೆ ಮಾಹಿತಿ ಇದೆ. ಶಿವರಾಮ ಕಾರಂತರ ಅವರ 'ಕರ್ನಾಟಕ'ದ ಚಿತ್ರಕಲೆ ಕೃತಿಯು ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಯಲ್ಲಿ ಬಂದಿದ್ದು, ಇದರಲ್ಲಿ ಬಾದಾಮಿ, ನರಗುಂದ, ನಿಪ್ಪಾಣಿ, ಅಥಣಿ, ಶ್ರವಣಬೆಳಗೋಳ, ಹಂಪೆ, ಬಿಜಾಪುರ ಮತ್ತು ಬಳಿಯ ಕಮಟಗಿ ಭಿತ್ತಿಚಿತ್ರಗಳ ಬಗೆಗಿನ ಬಗ್ಗೆ ಚರ್ಚೆ ಇದೆ. ಕಲಾಪ್ರಪಂಚದಲ್ಲಿ[೩೦] ಜಗತ್ತಿನ ವಿವಿಧ ರಾಷ್ಟ್ರಗಳ ಭಿತ್ತಿಚಿತ್ರಕಲೆಯನ್ನು ಸಾಂದರ್ಭಿಕವಾಗಿ ಹೇಳಲಾಗಿದೆ. ಭಾರತೀಯ ಚಿತ್ರಕಲೆ ಪುಸ್ತಕದಲ್ಲಿ ಪ್ರಾಚೀನ ಗ್ರಂಥಗಳಲ್ಲಿಯ ಭಿತ್ತಿಚಿತ್ರಕಲೆಯ ಉಲ್ಲೇಖಗಳ ವಿವರವಿದೆ.

೨೦೦೦ರಲ್ಲಿ ಬಾದಾಮಿ ಒಂದು ಸಾಂಸ್ಕೃತಿಕ ಅಧ್ಯಯನ, ಎಂಬ ಸಂಶೋಧನಾ ಪ್ರಬಂಧದಲ್ಲಿ ಡಾ.ಶಿಲಾಕಾಂತ ಪತ್ತಾರ್[೩೧] ಅವರು ಬಾದಾಮಿಯ ಪರಿಸರದ ಭಿತ್ತಿಚಿತ್ರಕಲೆಯನ್ನು ಪ್ರಾಸಂಗಿಕವಾಗಿ ಅಧ್ಯಯನ ಮಾಡಿದ್ದಾರೆ. ಮಲ್ಲಿಕಾರ್ಜುನ ಹಿರೇಮಠ ಅವರು ಸಂಪಾದಿಸಿದ ಬಾಗಿಲು ಬಾಗಲುಕೋಟೆ ಸಾಂಸ್ಕೃತಿಕ ಪರಂಪರೆ ಕೃತಿಯಲ್ಲಿ ಬಾಗಲಕೋಟೆ ಜಿಲ್ಲೆಯ ಗೋಡೆ ಚಿತ್ರಗಳ ಪ್ರಸ್ತಾಪವಿದೆ.

೧೯೩೦ರಲ್ಲಿ ರಸಯೋಗಿ ಗೆಳೆಯರ ಗುಂಪು[೩೨] ಕನ್ನಡ ಸಾಹಿತ್ಯ ಚಿತ್ರಕಲೆ ಎಂಬ ಲೇಖನ ಬರೆದಿದ್ದು, ಇದರಲ್ಲಿ ಕನ್ನಡ ಸಾಹಿತ್ಯ ಕೃತಿಗಳಲ್ಲಿ ಸಾಂದರ್ಭಿಕವಾಗಿ ಬಂದಿರುವ ಭಿತ್ತಿಚಿತ್ರಕಲೆಯ ವಿವರ ಮತ್ತು ಚಿತ್ರಕಲಾವಿದ ಚಿರಘಟ್ಟೆಯ ಕುರಿತು ಪ್ರಸ್ತಾಪಿಸಲಾಗಿದೆ. ೧೯೩೫ರಲ್ಲಿ[೩೩] ಬೆಂಗಳೂರು ಜಿಲ್ಲೆಯ ಚನ್ನಪಟ್ಟಣದಲ್ಲಿರುವ ತಿಪ್ಪೋಜಿ ಅರಮನೆಯ ಭಿತ್ತಿಚಿತ್ರಗಳ ಬಗೆಗಿನ ಮಾಹಿತಿ ದೊರೆಯುತ್ತದೆ.

೧೯೩೬ರಲ್ಲಿ ಪ್ರಕಟವಾದ ವಿಜಯನಗರ ಸಾಮ್ರಾಜ್ಯದ ಶತಮಾನೋತ್ಸವ ಸಮಾರಂಭದ ಸ್ಮರಣ ಸಂಚಿಕೆಯಲ್ಲಿ[೩೪] ಸಿ.ಶಿವರಾಮಮೂರ್ತಿಯವರು ವಿಜಯನಗರ ಪೇಂಟಿಂಗ್ ಪ್ರಾಮ್ ಲೇಪಾಕ್ಷಿ ಮತ್ತು ಹಂಪಿಯ ವಿರೂಪಾಕ್ಷಿ ದೇವಾಲಯದ ಭಿತ್ತಿಚಿತ್ರಗಳ ಬಗೆಗಿನ ವಿವರಗಳನ್ನು ನೀಡುತ್ತದೆ. ೧೯೩೬ರಲ್ಲಿ[೩೫] ಚಿಕ್ಕಮಗಳೂರು ಜಿಲ್ಲೆ ಮೂಡಗೆರೆ ತಾಲೂಕಿನ ಅಂಗಡಿಯ ವಾಸಂತಿಕಾ ದೇವಾಲಯದ ಭಿತ್ತಿಚಿತ್ರಗಳ ಕುರಿತು ತಿಳಿದುಬರುತ್ತದೆ.

೧೯೩೭ರಲ್ಲಿ ಪುರಾತತ್ವದ ವರದಿಯಲ್ಲಿ ಮೈಸೂರು ಜಿಲ್ಲೆಯ ಚಾಮರಾಜನಗರ ತಾಲೂಕು ಹರಪನಹಳ್ಳಿಯ ದಿವ್ಯಲಿಂಗೇಶ್ವರ ದೇವಾಲಯದ ಭಿತ್ತಿಚಿತ್ರಗಳ ಬಗ್ಗೆ ಮಾಹಿತಿ ದೊರಕುತ್ತದೆ. ಅದೇ ರೀತಿ ೧೯೩೮ರಲ್ಲಿ[೩೬] ಮೈಸೂರಿನ ಜಗನ್ಮೋಹನ ಚಿತ್ರಶಾಲೆಯ ಚಿತ್ರಗಳ ಕುರಿತು ವಿವರಣೆ ಕಾಣಸಿಗುತ್ತದೆ.

---

೨೯. ಬಿ.ಸಿ.ಪಾಟೀಲ್ : ಕೊಪ್ಪಳ ಸಾಂಸ್ಕೃತಿಕ ಪರಂಪರೆ, ಹರಿಹರ ಪ್ರಕಾಶನ, ಕೊಪ್ಪಳ, ೧೯೯೮, ಪುಟ-೨೨

೩೦. ಡಾ.ಶಿವರಾಮ ಕಾರಂತ : ಕರ್ನಾಟಕದಲ್ಲಿ ಚಿತ್ರಕಲೆ, ಮೈಸೂರು ವಿಶ್ವವಿದ್ಯಾಲಯ, ಪುಟ-೩೬

೩೧. ಡಾ.ಶೀಲಾಕಾಂತ ಪತ್ತಾರ : ಬಾದಾಮಿ ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪುಟ-೧೬

೩೨. ಕನ್ನಡ ಸಾಹಿತ್ಯಪರಿಷತ್ : ಕನ್ನಡ ಸಾಹಿತ್ಯದಲ್ಲಿ ಚಿತ್ರಕಲೆ, ರಸಯೋಗ ಗೆಳೆಯರ ಬಳಗ, ಪುಟ-೪೨

33. Mysore Archaeological Report (1935), Page No-20

34. Vijayanagara Sexcentenary, commemoration Volume, Dharwad (1936) Vijiyanagara Painting & From Lepakshi C.Sivaramamurti ii) lbid S.Paramasivah.

35. Mysore Archaeological Report (1936), Page-17

36. Mysore Archaeological Report (1937), Page-38&71

೧೯೪೦ರಲ್ಲಿ[೩೭] ದ.ರಾ.ಬೇಂದ್ರೆಯವರ ಲೇಖನ ಕಲಾವಿದ ಚಿರಘಟ್ಟಿಯ ಕುರಿತು ಚರ್ಚಿಸಿದರೆ ೧೯೪೧ರಲ್ಲಿ ಎಸ್.ರಾಮಚಂದ್ರಾರಾವ್ ಅವರ ಬಾಸದಲ್ಲಿ ಚಿತ್ರಕಲೆ ಮತ್ತು ಸಂಗೀತ ಲೇಖನವು ಬಾಸನ ನಾಟಕದಲ್ಲಿ ಬರುವ ಭಿತ್ತಿಚಿತ್ರಗಳಿಂದ ಶೋಭಿಸುವ ಮನೆಗೆ ಅರಮನೆ, ದೇವಾಲಯಗಳನ್ನು ವರ್ಣಿಸುತ್ತವೆ. ೧೯೪೨ರಲ್ಲಿ ಬಿ.ವಿ.ಕೆ.ಶಾಸ್ತ್ರಿ ಅವರ ಪ್ರಾಚೀನ ಚಿತ್ರಕಲೆ ಲೇಖನ[೩೮] ಪ್ರಾಗೈತಿಹಾಸಿಕ ಭಿತ್ತಿಚಿತ್ರಕಲೆಯ ಕುರಿತು ಸ್ಥೂಲವಾಗಿ ಚರ್ಚಿಸಿದೆ.

೧೯೪೨ರಲ್ಲಿ ವಿ.ಎಂ.ಇನಾಮ್‌ದಾರ ಅವರು ಕಾಳಿದಾಸ ಮತ್ತು ಚಿತ್ರಕಲೆ ಲೇಖನವು[೩೯] ಕಾಳಿದಾಸನ ಕೃತಿಗಳಲ್ಲಿ ಬರುವ ಭಿತ್ತಿಚಿತ್ರಗಳಿಂದ ಶೋಭಿಸುವ ಮನೆ, ಅರಮನೆ, ದೇವಾಲಯಗಳನ್ನು ವರ್ಣಿಸುತ್ತದೆ. ೧೯೪೩ರಲ್ಲಿ ಪುರಾತತ್ವ ವರದಿಯು ಕೋಲಾರ ಜಿಲ್ಲೆಯ ಮುಳಬಾಗಿಲು ಆಂಜನೇಯ ದೇವಾಲಯದ ಭಿತ್ತಿಚಿತ್ರಗಳ ಬಗ್ಗೆ ಮತ್ತು ೧೯೪೫ರ ವರದಿಯಲ್ಲಿ[೪೦] ತುಮಕೂರು ಜಿಲ್ಲೆಯ ಶಿರಾ ತಾಲೂಕಿನ ಸಿಬಿಯ ರೇವಣಸಿದ್ದೇಶ್ವರ ದೇವಾಲಯದ ಭಿತ್ತಿಚಿತ್ರಗಳ ಮಾಹಿತಿ ನೀಡುತ್ತದೆ. ೧೯೪೯ರಲ್ಲಿ ಸಿ.ಟಿ.ಎಂ.ಕೊಟ್ರಯ್ಯ ಅವರ ಲೇಖನವು[೪೧] ಹಂಪಿಯ ವಿರೂಪಾಕ್ಷ ದೇವಾಲಯದ ಭಿತ್ತಿಚಿತ್ರಗಳ ವಿವರ ನೀಡುತ್ತದೆ. ಇಲ್ಲಿ ಚಿತ್ರಗಳ ಕಾಲಮಾನದ ಬಗ್ಗೆಯೂ ಚರ್ಚೆ ಇದೆ. ೧೯೫೦ರಲ್ಲಿ ಎಂ.ಎ.ಸೀತಾರಾಮಯ್ಯನವರ ಲೇಖನ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಬರುವ ಭಿತ್ತಿಚಿತ್ರಗಳಿಂದ ಅಲಂಕರಿಸಿದೆ. ಮನೆ, ಅರಮನೆ, ದೇವಾಲಯಗಳನ್ನು ಕುರಿತು ವಿವರಿಸಿ ಜನಪರ ಭಿತ್ತಿಚಿತ್ರಗಳ ಬಗೆಗಿನ ಚಿಕ್ಕ ಮಾಹಿತಿ ಕೊಡುತ್ತದೆ. ೧೯೫೪ರಲ್ಲಿ ಮೋತಿಚಂದ್ರ ಅವರ[೪೨] ಲೇಖನವು ಬಿಜಾಪುರದ ಅರಸಮಹಲ್ ಮತ್ತು ಸಮೀಪದ ಕಮತಗಿಯ ಭಿತ್ತಿಚಿತ್ರಗಳನ್ನು ಕುರಿತು ಚರ್ಚಿಸುತ್ತದೆ.

೧೯೫೯ರಲ್ಲಿ ಸಿ.ಶಿವರಾಮಮೂರ್ತಿಯವರ ಲೇಖನವು ಬಾದಾಮಿಯ ವೈಷ್ಣವ ಗುಹೆಯ ಭಿತ್ತಿಚಿತ್ರಗಳ ವಿಷಯ ಶೈಲಿ ವರ್ಣಗಾರಿಕೆ ಕುರಿತು ಮಾಹಿತಿ ನೀಡುತ್ತದೆ. ೧೯೫೯ರ ಪಿ.ಆರ್.ತಿಪ್ಪೇಸ್ವಾಮಿಯವರು ಪ್ರಾಚೀನ ಚಿತ್ರ ರಚನೆಯಲ್ಲಿ ಭಿತ್ತಿ ಸಿದ್ಧತೆ ಎಂಬ ಲೇಖನ ಬರೆದಿದ್ದು. ಇದರಲ್ಲಿ ವಿಷ್ಣುಧರ್ಮೋತ್ತರ, ಶಿವರತ್ನಾಕರ, ಮಾನಸೋಲ್ಲಾಸ, ಗ್ರಂಥಗಳಲ್ಲಿ ಭಿತ್ತಿಚಿತ್ರ ವಿವರಗಳನ್ನು ಚರ್ಚಿಸಲಾಗಿದೆ. ೧೯೬೬ರಲ್ಲಿ ತಿ.ತಾ.ಶರ್ಮ ಅವರ ಲೇಖನ ಶಿ.ಬಿ.ಭಿತ್ತಿಚಿತ್ರಗಳ ಬಗೆಗೆ ಕಿರು ಮಾಹಿತಿ ನೀಡಿದೆ. ೧೯೭೨ರಲ್ಲಿ ಬಿ.ವಿ.ಕೆ.ಶಾಸ್ತ್ರೀಯವರು ಸುಧಾ, ಯುಗಾದಿ ವಿಶೇಷಾಂಕಕ್ಕೆ ಮಾನಸೋಲ್ಲಾಸದಲ್ಲಿ ಚಿತ್ರಕಲೆ ಎಂಬ ಮತ್ತೊಂದು ಲೇಖನ ಬರೆದಿದ್ದಾರೆ. ಇವುಗಳಲ್ಲಿ ಮಾನಸೋಲ್ಲಾಸ ಗ್ರಂಥದಲ್ಲಿ ಹೇಳಲ್ಪಟ್ಟ ಭಿತ್ತಿಚಿತ್ರ

---

೩೭. ಸಾಹಿತ್ಯ ಸಂಶೋಧನೆ (ಧಾರವಾಡ ೧೯೪೦) ಪುಟ ೧೩೪, ೧೩೭, ಚಿರಘಟ್ಟಿ ಯಾರು ಒಂದೊಂದೆ : ದ.ರಾ.ಬೇಂದ್ರೆ

೩೮. ಪ್ರಬುದ್ಧ ಕರ್ನಾಟಕ ೧೯೪೨, ಪುಟ-೨೧೨-೩೧, ಮೈಸೂರು ಪ್ರಾಚೀನ ಚಿತ್ರಕಲೆ : ಬಿ.ಕೆ.ಶಾಸ್ತ್ರಿ

೩೯. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ (ಡಿಸೆಂಬರ್ ೧೯೪೨) ಕಾಳಿದಾಸ ಮತ್ತು ಚಿತ್ರಕಲೆ : ವಿ.ಎಮ್.ಇನಾಂಧಾರ್

40. Mysore Archaeological Report (1945), Page-35

41. J.M.S -11 (1949), Page 228-37, Vijayanagar Painting at the virupakshi Temple, Hampi

42. Bijapur Municipality, Century Souriner (1954) Page-55-64, Decani School, Bijapur, Motichandra

ನೆಲೆಗಳು ಭಿತ್ತಿಚಿತ್ರ ವಿವರಗಳನ್ನು ಚರ್ಚಿಸಲಾಗಿದೆ. ೧೯೭೩ರಲ್ಲಿ ಪ್ರಕಟವಾದ ಜ್ಞಾನಗಂಗೋತ್ರಿಯ ೫ನೇ ಸಂಪುಟದಲ್ಲಿ ಭಿತ್ತಿಚಿತ್ರ ಸಿದ್ಧತೆ ಚಿತ್ರರಚನಾ ಕ್ರಮ ಬಣ್ಣಗಾರಿಕೆ ಚಿತ್ರಗಳ ವಸ್ತುವಿಷಯ ಕುರಿತಾದ ಲೇಖನವು ಬಿಜಾಪುರದ ಭಿತ್ತಿಚಿತ್ರಗಳ ಬಗೆಗೆ ಕಿರು ಮಾಹಿತಿ ನೀಡುತ್ತದೆ. ೧೯೭೮ರ ಪಿ.ಆರ್.ತಿಪ್ಪೇಸ್ವಾಮಿಯವರ ಲೇಖನ ಕರ್ನಾಟಕದ ಭಿತ್ತಿಚಿತ್ರಕಲೆಯ ಸಂಕ್ಷಿಪ್ತ ಮಾಹಿತಿ ನೀಡುತ್ತದೆ.

೧೯೭೯ರಲ್ಲಿ ಪ್ರಕಟವಾದ ಕನ್ನಡ ವಿಷಯ ವಿಶ್ವಕೋಶದಲ್ಲಿ ಭಿತ್ತಿಚಿತ್ರಕಲೆಯ ಮಾಹಿತಿ ದೊರಕುತ್ತದೆ. ೧೯೮೦ರಲ್ಲಿ ಕೆ.ಜಿ.ಕುಂದಾಣಗಾರ ಅವರ ಲೇಖನ ಕನ್ನಡ ಸಾಹಿತ್ಯದಲ್ಲಿ ಸಾಂದರ್ಭಿಕವಾಗಿ ಬರುವ ಭಿತ್ತಿಚಿತ್ರಕಲೆಯ ವಿವರಗಳನ್ನು ಹೇಳುತ್ತದೆ. ೧೯೮೦ರಲ್ಲಿ ಪಿ.ಆರ್.ತಿಪ್ಪೇಸ್ವಾಮಿಯವರ ಲೇಖನದಲ್ಲಿ, ಭಾರತೀಯ ಚಿತ್ರಕಲಾ ಪರಂಪರೆ ಬೆಳೆದು ಬಂದಿದ್ದನ್ನು ಹೇಳುವಲ್ಲಿ ಕರ್ನಾಟಕದ ಭಿತ್ತಿಚಿತ್ರಕಲೆಯ ವಿವರ ಹೇಳಲಾಗಿದೆ. ೧೯೮೨ರಲ್ಲಿ ಡಾ.ಅ.ಸುಂದರ ಅವರ ಲೇಖನದಲ್ಲಿ ಬಾದಾಮಿ ಮತ್ತು ಸುತ್ತಲಿನ ಪ್ರಾಗೈತಿಹಾಸಿಕ ಮತ್ತು ಐತಿಹಾಸಿಕ ಚಿತ್ರಗಳನ್ನು ಕುರಿತು ಚರ್ಚಿಸಲಾಗಿದೆ. ೧೯೮೨ರಲ್ಲಿ ಕರ್ನಾಟಕ ರಾಜ್ಯ ಗೆಝೆಟೀಯರ್‌ನಲ್ಲಿ ಭಿತ್ತಿಚಿತ್ರಗಳ ಬಗೆಗಿನ ವಿವರಗಳು ಕಂಡುಬರುತ್ತವೆ.[೪೩]

೧೯೮೬ರಲ್ಲಿ ಪಿ.ಆರ್.ತಿಪ್ಪೇಸ್ವಾಮಿಯವರ ಲೇಖನ[೪೪] ಕರ್ನಾಟಕದ ಭಿತ್ತಿಚಿತ್ರಕಲೆಯ ಬೆಗೆಗೆ ಕಿರುನೋಟ ಹರಿಸುತ್ತದೆ. ಎಂ.ಆರ್.ಶ್ಯಾನಭಾಗ ಅವರ[೪೫] ಲೇಖನ ಕರಾವಳಿ ಭಾಗದ ಕಾವಿ ಭಿತ್ತಿಚಿತ್ರಕಲೆಯನ್ನು ಸಂಕ್ಷಿಪ್ತವಾಗಿ ಪರಿಚಯಿಸಿದರೆ. ಡಾ.ಎಸ್.ಸಿ.ಪಾಟೀಲ್ ಅವರ[೪೬] ಲೇಖನ ಪ್ರಾಚೀನ ಭಿತ್ತಿಚಿತ್ರ ರಚನೆಯಲ್ಲಿ ಅನುಸರಿಸುತ್ತಿದ್ದ ಚಿತ್ರಕಲೆಯ ಆರು ಅಂಗ ಲಕ್ಷಣಗಳನ್ನು ಕುರಿತು ಚರ್ಚಿಸಿದ್ದಾರೆ. ಬಿ.ವಿ.ಕೆ.ಶಾಸ್ತ್ರೀ ಅವರ ಲೇಖನವು[೪೭] ಕನ್ನಡ ಸಾಹಿತ್ಯದಲ್ಲಿ ಬರುವ ಭಿತ್ತಿಚಿತ್ರಕಲೆಯ ಅಂಶಗಳು ಮತ್ತು ಕಲಾವಿದರ ಜೀರಘಟ್ಟಿಯ ಬಗ್ಗೆ ಚರ್ಚಿಸಿದೆ.

೧೯೮೭ರಲ್ಲಿ ಪ್ರಕಟವಾದ ಹರತಿಸಿರಿ ನೆನಪಿನ ಸಂಪುಟದಲ್ಲಿ[೪೮] ಅ. ಸುಂದರ ಅವರ ಲೇಖನ ಪ್ರಾಗೈತಿಹಾಸಿಕ ಗವಿವರ್ಣ ಮತ್ತು ಬಯಲು ಬಂಡೆಗಳ ಚಿತ್ರಗಳ ಬಗೆಗೆ ಮಾಹಿತಿ ನೀಡಿದ್ದಾರೆ. ಶ್ರೀಶೈಲ ಆರಾಧ್ಯ ಅವರ ಲೇಖನ ಚಿತ್ರದುರ್ಗ ಪರಿಸರ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ಕುರಿತು ವಿವರಣೆ ಕೊಡುತ್ತದೆ. ಡಾ.ಕೃಷ್ಣಾನಂದ ಕಾಮತ್ ಅವರ ಲೇಖನದಲ್ಲಿ ಸಿಬಿಯ ಭಿತ್ತಿಚಿತ್ರಗಳ ವಸ್ತುವಿಷಯ ವರ್ಣಗಾರಿಕೆ, ಚಿತ್ರಶೈಲಿಗಳನ್ನು ಪರಿಚಯಿಸುತ್ತದೆ. ೧೯೮೮ರಲ್ಲಿ ಆರ್.ರಾಮಕೃಷ್ಣನ್ ಅವರ[೪೯] ಲೇಖನ ಶಿಬಿಯ

---

೪೩. ಯಾದಪ್ಪ ಬಿ. ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ, ಪಿಹೆಚ್.ಡಿ ಅಪ್ರಕಟಿತ, ಮಹಾಪ್ರಬಂಧ, ಪುಟ-೧೮
೪೪. ಪಿ.ಆರ್.ತಿಪ್ಪೇಸ್ವಾಮಿ : ಸವಿ ಸಂಚಯ, ಭಾರತೀಯ ಚಿತ್ರಕಲಾ ಪರಂಪರೆ, ಪುಟ-೪೦
೪೫. ಸಂಯುಕ್ತ ಕರ್ನಾಟಕ, ಸಾಪ್ತಾಹಿಕ ಸೌರಭ : ಕರಾವಳಿ ದೇಗುಲಗಳಲ್ಲಿನ ಭಿತ್ತಿಚಿತ್ರ, ಪುಟ-೪
೪೬. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಚಿತ್ರಕಲೆಯ ಆರು ಅಂಗಗಳ ಲಕ್ಷಣಗಳು : ಎಸ್.ಸಿ.ಪಾಟೀಲ, ೧೯೮೬, ಪುಟ-೨೬
೪೭. ವಿಶ್ವಕನ್ನಡ ಸಂಪುಟ-೩ (೧೯೮೬) ಕನ್ನಡ ಸಾಹಿತ್ಯದಲ್ಲಿ ದೃಶ್ಯಕಲೆ : ಬಿ.ವಿ.ಕೆ.ಶಾಸ್ತ್ರಿ
೪೮. ಲಕ್ಷ್ಮಣ ತೆಲಗಾವಿ : ಚಿತ್ರದುರ್ಗದ ಪರಿಸರದ ಪ್ರಾಗೈತಿಹಾಸಿಕ ಚಿತ್ರಗಳು, ಪುಟ-೩೨
49. Souviner form The sibi Temple (1988), Page 83, 88 The Sibimurals R.Ramkrishna

ಭಿತ್ತಿಚಿತ್ರಗಳ ಬಗೆಗೆ ಒಂದು ಸ್ಥೂಲನೋಟ ನೋಡುತ್ತದೆ. ೧೯೯೧ರಲ್ಲಿ ಡಾ.ಜೋತ್ಸ್ನಾಕಾಮತ್ ಅವರ ಲೇಖನ[50] ಭಿತ್ತಿಚಿತ್ರಗಳಲ್ಲಿ ಐತಿಹಾಸಿಕ ವ್ಯಕ್ತಿಗಳನ್ನು ಗುರುತಿಸುವುದಾಗಿದ್ದರೆ. ಇವರದೇ ಇನ್ನೊಂದು ಲೇಖನ ೧೯೯೬ರಲ್ಲಿ ಭಿತ್ತಿಚಿತ್ರಗಳಲ್ಲಿ ತೇರನ್ನು ಕುರಿತುದ್ದಾಗಿದೆ. ೧೯೯೩ರಲ್ಲಿ ಪ್ರಕಟವಾದ ೬೨ನೇ ಕನ್ನಡ ಸಾಹಿತ್ಯ ಸಮ್ಮೇಳನ ಸ್ಮರಣ ಸಂಚಿಕೆಯಲ್ಲಿ ರಾಯಚೂರು ಮತ್ತು ಕೊಪ್ಪಳ ಜಿಲ್ಲೆಯ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳ ವಿವರಣೆ ಇದೆ.

೧೯೯೫ರಲ್ಲಿ ಸ್ಕೂಲ್ ಆಫ್ ಆರ್ಟ್ಸ್ ಧಾರವಾಡ ವಜ್ರಮಹೋತ್ಸವ ಸ್ಮರಣ ಚಿತ್ರಾಕ್ಷಿಯಲ್ಲಿ ಗುಳೇದ ಗುಡ್ಡದ ಭಿತ್ತಿಚಿತ್ರಗಳು ವಿಶಿಷ್ಟ ವರ್ಣಕಲೆಯ ಆಗರ ಬಾದಾಮಿ ಹೀಗೆ ಭಿತ್ತಿಚಿತ್ರಕಲೆ ಮತ್ತು ಅದಕ್ಕೆ ಪೂರಕವಾದ ೧೧ ಲೇಖನಗಳಿವೆ. ಇವು ಭಿತ್ತಿಚಿತ್ರಕಲೆಯ ಒಂದು ಪರಿಚಯಾ ನೋಟ ಕೊಡುತ್ತವೆ. ೧೯೯೬ರಲ್ಲಿ ಪುರಾತತ್ವ ಇಲಾಖೆಯು ಗ್ರಂಥ ಒಂದನ್ನು ಹೊರತಂದಿದ್ದು. ಅದರಲ್ಲಿ ಕೃಷ್ಣಾನಂದ ಕಾಮತ್ ಅವರ ಲೇಖನವಿದು. ಕರಾವಳಿ ಭಾಗದ ಕಾವಿ ಭಿತ್ತಿಚಿತ್ರಗಳ ಕುರಿತಾದ ಮಾಹಿತಿ ಇದರಲ್ಲಿದೆ. ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಜಯತೀರ್ಥ ಕಾಗಲಕರ ಅವರ ಲೇಖನ ಸುರಪುರದ ಗರುಡಾದ್ರಿ ಶೈಲಿಯ ಭಿತ್ತಿಚಿತ್ರಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳುತ್ತದೆ.

೧೯೯೭ರಲ್ಲಿ ಕನ್ನಡ ವಿಶ್ವವಿದ್ಯಾಲಯವು ಕರ್ನಾಟಕ ಚರಿತ್ರೆ ಮಾಲೆ ಎಂಬ ಏಳು ಸಂಪುಟಗಳನ್ನು ಹೊರತಂದಿದ್ದು, ಅವುಗಳಲ್ಲಿ ಕಲೆಯನ್ನು ಕುರಿತು ಹೇಳುವಾಗ ಆಯಾ ಕಾಲದ ಭಿತ್ತಿಚಿತ್ರಗಳ ಕುರಿತು ಪ್ರಾಸಂಗಿಕವಾಗಿ ವಿವರ ಕೊಡಮಾಡಿದ್ದಾರೆ. ೧೯೯೮ರ ಇತಿಹಾಸ ದರ್ಶನ ಸಂಪುಟ ೧೩ರಲ್ಲಿ ಶೀಲಾಕಾಂತ ಪತ್ತಾರ ಅವರ ಮತ್ತೆರಡು ಚಾಲುಕ್ಯ ವರ್ಣಚಿತ್ರಗಳ ಶೋಧ ವಿ.ಟಿ.ಎಸ್.ರಾವ್ ಅವರ ಕರ್ನಾಟಕ ಭಿತ್ತಿಚಿತ್ರಗಳಲ್ಲಿ ವಿಶಿಷ್ಟವಾದ ಲೇಪಾಕ್ಷಿಯ ಚಿತ್ರಗಳು ಡಾ.ಬೆಂ.ಶಾ.ಶ್ಯಾಮಾಲಾ ರತ್ನಕುಮಾರಿ ಅವರ ಗೇರುಸೊಪ್ಪಾದಲ್ಲಿನ ಕಾವಿ ಚಿತ್ರಗಳು ಒಂದು ಹೊಸಶೋಧ ಎಂಬ ಲೇಖನಗಳು ಪ್ರಸಿದ್ಧವಾಗಿದೆ. ೧೯೯೮ರಲ್ಲಿ ಕರ್ಮವೀರ ಪತ್ರಿಕೆಯಲ್ಲಿನ ಎಸ್.ವೆಂಕಟೇಶ ಅವರ ಲೇಖನ[51] ಸಿರಾ ಭಿತ್ತಿಚಿತ್ರಗಳ ಮತ್ತು ಪ್ರಜಾವಾಣಿ ದೀಪಾವಳಿ ಸಂಚಿಕೆಯಲ್ಲಿನ ಕೃಷ್ಣಾನಂದ ಕಾಮತ್ ಅವರ ಲೇಖನ[52] ಲೇಪಾಕ್ಷಿ ಭಿತ್ತಿಚಿತ್ರಗಳ ವಿಷಯ ವೈವಿಧ್ಯ ವರ್ಣಗಾರಿಕೆ ರೇಖಾವಿನ್ಯಾಸ ಕಾಲವಿಚಾರಗಳ ಕುರಿತು ಸ್ಥೂಲ ಮಾಹಿತಿ ನೀಡುತ್ತವೆ.

೧೯೯೯ರಲ್ಲಿ ಮ.ಮುರಳಿಕೃಷ್ಣ ಅವರು[53] ಸುಧಾ ಪತ್ರಿಕೆಗೆ ಲೇಖನ ಬರೆದಿದ್ದು, ಅದರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಸುರಾಲುವಿನ ಹಳೆಯ ಮಣ್ಣಿನ ಅರಮನೆಯ ಭಿತ್ತಿಚಿತ್ರಗಳ ಕುರಿತು ಪ್ರಸ್ತಾಪಿಸುತ್ತಾರೆ. ೧೯೯೯ರಲ್ಲಿ ಅ.ಲ.ನರಸಿಂಹನ್ ಅವರು ಆಲೇಖ್ಯ ಎಂಬ ಕೃತಿ ಹೊರತಂದಿದ್ದು ಅದರಲ್ಲಿ ಶಿಷ್ಟಪದ

---

೫೦. ಇತಿಹಾಸದರ್ಶನ ಸಂಪುಟ-೬ (೧೯೯೧) ಕರ್ನಾಟಕ ಇತಿಹಾಸ ಅಕಾಡೆಮಿ : ಬೆಂಗಳೂರು ಭಿತ್ತಿಚಿತ್ರಗಳಲ್ಲಿ ಐತಿಹಾಸಿಕ ವ್ಯಕ್ತಿಗಳು ಡಾ.ಜೋತ್ಸ್ನಾ ಕಾಮತ್

೫೧. ಕರ್ಮವೀರ, ಅವಸಾನದ ಅಂಚಿನಲ್ಲಿ ಸಿರಾದ ಭಿತ್ತಿಚಿತ್ರಗಳು : ಎಸ್.ವೆಂಕಟೇಶ, ೧೯೯೮, ಪುಟ-೩೮-೪೧

೫೨. ಪ್ರಜಾವಾಣಿ ದೀಪಾವಳಿ ವಿಶೇಷಾಂಕ, ಲೇಪಾಕ್ಷಿಯ ಭಿತ್ತಿಚಿತ್ರಗಳು : ಕೃಷ್ಣಾನಂದ ಕಾಮತ್, ೧೯೯೮, ಪುಟ-೬೮-೭೫

೫೩. ಸುಧಾ, ತೋಳೆರಾಳಿದ ಸುಂದರ ಸುರಾಲು : ಮುರಳಿಕೃಷ್ಣ, ೧೯೯೯, ಪುಟ-೪೨-೪೪

ಚಿತ್ರಕಲೆಯ ಉಗಮ ಕರ್ನಾಟಕ ಚಿತ್ರಕಲೆಯಲ್ಲಿ ಸಂಸ್ಕೃತಿ, ಎಂಬ ಎರಡು ಲೇಖನಗಳು ಭಿತ್ತಿಚಿತ್ರಕಲೆಗೆ ಸಂಬಂಧಿಸಿದವುಗಳಾಗಿವೆ. ಕರ್ಮವೀರದಲ್ಲಿನ ಎಸ್.ವೆಂಕಟೇಶ ಅವರ ಲೇಖನ[೫೪] ತುಮಕೂರಿನ ನಲ್ಲಪ್ಪನ ಹಳೆಯ ಮನೆಯಲ್ಲಿನ ಭಿತ್ತಿ ಚಿತ್ರಗಳನ್ನು ವಿವರಿಸಿದ್ದಾರೆ. ಎನ್.ಜಗನ್ನಾಥ ಪ್ರಕಾಶ ಅವರ ಲೇಖನ[೫೫] ಶ್ರವಣಬೆಳಗೋಳದ ಜೈನಮಠದ ಭಿತ್ತಿಚಿತ್ರಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳುತ್ತದೆ.

೨೦೦೦ರಲ್ಲಿನ ಎಸ್.ವೆಂಕಟೇಶ ಅವರ[೫೬] ಲೇಖನ ಆನೆಗುಂದಿಯಲ್ಲಿ ಹಾಳಾಗಿರುವ ಭಿತ್ತಿಚಿತ್ರಗಳ ಬಗೆಗೆ ಸಂಕ್ಷಿಪ್ತವಾದ ಮಾಹಿತಿಯನ್ನು ನೀಡಿದ್ದಾರೆ. ರಾಜೇಶ್ ಶಾಹಬಾದಿ ಅವರ ಲೇಖನ[೫೭] ಸುರಪುರದ ಭಿತ್ತಿಚಿತ್ರಗಳ ಕಿರುನೋಟ ಬೀರುತ್ತದೆ. ೨೦೦೦ರಲ್ಲಿ ಇತ್ತೀಚೆಗೆ ಡಾ.ಎಸ್.ಸಿ.ಪಾಟೀಲ ಪ್ರಬಂಧವು[೫೮] ಬಿ.ಕೆ.ಹಳ್ಳಿಯ ಅಪೂರ್ವ ಭಿತ್ತಿಚಿತ್ರ ಭಂಡಾರ ಶೋಧ ಹಳಿಯಾಳ ಸಮೀಪದ ಬಂಜಾರ ಕಂಚನ ಹಳ್ಳಿಯ ಶ್ರೀರಾಮಮಂದಿರದ ಭಿತ್ತಿಚಿತ್ರಗಳನ್ನು ಮೊದಲ ಬಾರಿಗೆ ಬೆಳಕಿಗೆ ತಂದಿರುವುದಲ್ಲದೇ ಅವುಗಳ ವಿಷಯ ವೈವಿಧ್ಯ ವರ್ಣಸಂಯೋಜನೆ ರೇಖಾವಿನ್ಯಾಸ ಕಾಲಮಾನದ ಬಗೆಗೆ ಚರ್ಚಿಸಲಾಗಿದೆ.

ಇನ್ನೂ ಕನ್ನಡದಲ್ಲಿ ಚಿತ್ರಕಲೆಯ ಬಗ್ಗೆ ಶಾಸ್ತ್ರೀಯವಾಗಿ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನಾ ಅಧ್ಯಯನಗಳು ಇತ್ತೀಚೆಗೆ ಪ್ರಾರಂಭಗೊಂಡಿವೆ. ಕನ್ನಡದಲ್ಲಿ ಮೊದಲು ಚಿತ್ರಕಲೆಯನ್ನು ಅಧ್ಯಯನ ವಿಷಯವಾಗಿ ತೆಗೆದುಕೊಂಡು ಸಂಶೋಧನೆ ಮಾಡಿದವರು ಡಾ.ಎಸ್.ಸಿ.ಪಾಟೀಲರವರು[೫೯] ಅವರ ಕರ್ನಾಟಕದ ಜನಪದ ಚಿತ್ರಕಲೆ ಎಂಬ ಸಂಶೋಧನಾ ಪ್ರಬಂಧವೇ ಕರ್ನಾಟಕದಲ್ಲಿ ಮೊದಲ ಚಿತ್ರಕಲಾ ಕ್ಷೇತ್ರದ ಪಿಹೆಚ್.ಡಿ., ಮಹಾಪ್ರಬಂಧವೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇದರಲ್ಲಿ ಕರ್ನಾಟಕದ ಅದರಲ್ಲೂ ಉತ್ತರ ಕರ್ನಾಟಕದ ಜನಪದ ಚಿತ್ರಕಲೆ ವಿವರದ ವಿಶ್ಲೇಷಣೆ ಇದೆಯಲ್ಲದೇ ಜನಪದ ಭಿತ್ತಿಚಿತ್ರಕಲೆಯ ಬಗ್ಗೆಯಾಗಿ ಸಾಂದರ್ಭಿಕವಾಗಿ ಅಧ್ಯಯನ ಮಾಡಿದ್ದಾರೆ. ಇದಕ್ಕೆ ೧೯೯೧ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಡಾಕ್ಟರೇಟ್ ಪದವಿ ನೀಡಿದೆ.

ಡಾ.ಆ.ಲ.ನರಸಿಂಹನ್ ಅವರು ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು ಎಂಬ ವಿಷಯವಾಗಿ ಮಹಾಪ್ರಬಂಧ ರಚಿಸಿದ್ದು, ಇದರಲ್ಲಿ ಕರ್ನಾಟಕದ ಕೆಲವು ಪ್ರದೇಶದ ಭಿತ್ತಿಚಿತ್ರಗಳನ್ನು ಸಾಂಸ್ಕೃತಿಕ ಅಂಶಗಳಿಗೆ ಸಾಂದರ್ಭಿಕವಾಗಿ ಬಳಸಿಕೊಂಡು ವಿಶೇಷವಾಗಿ ಅಧ್ಯಯನ ಮಾಡಿದ್ದಾರೆ. ೧೯೯೮ರಲ್ಲಿ

---

೫೪. ಆ.ಲ.ನರಸಿಂಹನ್ : ಆ ಲೇಖನ ಸಂಯೋಜಿತ, ಬಂಗಳೂರು, ೧೯೯೯

೫೫. ಕರ್ಮವೀರ : ಕಣ್ಣ ಹಾಯಿಸಲಾರದೇ ಈ ಭಿತ್ತಿಚಿತ್ರಗಳು, ಎಸ್.ವೆಂಕಟೇಶ, ೧೯೯೯, ಪುಟ-೪೨-೪೩

೫೬. ಕರ್ಮವೀರ : ಶ್ರವಣಬೆಳಗೊಳದ ಭಿತ್ತಿಚಿತ್ರಗಳು, ಎನ್.ಜಗನ್ನಾಥ ಪ್ರಕಾಶ, ೧೯೯೯, ಪುಟ-೩೮-೩೯

೫೭. ನೂತನ, ಕಣ್ಮರೆಯಾಗುತ್ತಿರುವ ಆನೆಗುಂದಿಯ ಭಿತ್ತಿಚಿತ್ರಗಳು, ಎಸ್.ವೆಂಕಟೇಶ, ೨೦೦೦, ಪುಟ-೩೫-೩೬

೫೮. ಡಾ.ಎಸ್.ಸಿ.ಪಾಟೀಲ ಅವರ ಅಪ್ರಕಟಿತ ಲೇಖನ ಇದನ್ನು ಇತಿಹಾಸ ಅಕಾಡೆಮಿ ವಾರ್ಷಿಕ ಸಮಾವೇಶ ಹಂಪಿಯಲ್ಲಿ ಮಂಡಿಸಲಾಗಿದೆ. ಈ ಲೇಖನವನ್ನು ಬಳಸಿಕೊಳ್ಳಲು ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ಅವರಿಗೆ ಕೃತಜ್ಞತನಾಗಿದ್ದೇನೆ.

೫೯. ಡಾ.ಬಿ.ಕೆ.ಹಿರೇಮಠ ಅವರು ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ ಎಂಬ ಸಂಶೋಧನಾ ಮಹಾಪ್ರಬಂಧ ರಚಿಸಿದ್ದು. ಅದರಲ್ಲಿ ಹಸ್ತಪ್ರತಿ ಚಿತ್ರಕಲೆಯನ್ನು ಕುರಿತು ಸಾಂದರ್ಭಿಕವಾಗಿ ಅದ್ಯಯನ ಮಾಡಿದ್ದಾರೆ.

ಬೆಂಗಳೂರು ವಿಶ್ವವಿದ್ಯಾಲಯದಿಂದ ಡಾ.ಪುಷ್ಪ ದ್ರಾವಿಡ್[೬೦] ಅವರು ಕಲಾವಿದ ರೋರಿಚ್ ಅವರ ಕಲಾಕೃತಿಗಳ ಬಗ್ಗೆ ಅಧ್ಯಯನ ಮಾಡಿದ್ದು, ಅವರಿಗೆ ಡಾಕ್ಟರೇಟ್ ಪದವಿ ಲಭಿಸಿದೆ.

ಡಾ.ವೀಣಾ ಶೇಖರ ಶಿಬಿ ಭಿತ್ತಿಚಿತ್ರಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳಲಾಗಿದೆ. ಡಾ.ಮೋಹನ ಬಿ.ಪಂಚಾಳ (ಸಂ)., ವಜ್ರವಿಜಯ, ಡಾ.ಯಾದಪ್ಪ ಬಿ.ಪರದೇಶಿಯವರು ೨೦೧೧ರಲ್ಲಿ ಎಂ.ಎಸ್.ಮೂರ್ತಿಯವರ ಆಧುನಿಕ ಭಿತ್ತಿ ರೂಹುಗಳ ಬಗ್ಗೆ ಲೇಖನದಲ್ಲಿ ಸಂಕ್ಷಿಪ್ತವಾಗಿ ವಿವರಿಸುತ್ತಾರೆ.

**ಅಧ್ಯಯನದ ಸ್ವರೂಪ**

ಪ್ರಸ್ತುತ ಅಧ್ಯಯನವನ್ನು ಹತ್ತು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡಿದ್ದು, ಅವುಗಳ ಸಂಕ್ಷಿಪ್ತ ವಿವರವನ್ನು ಇಲ್ಲಿ ನೀಡಲಾಗಿದೆ.

ಅಧ್ಯಾಯ-ಒಂದು

ಈ ಅಧ್ಯಾಯದಲ್ಲಿ ನಾನು ಅಧ್ಯಯನ ಕೈಗೊಂಡ ಉದ್ದೇಶಗಳು, ಒಟ್ಟು ಹತ್ತು ಅಧ್ಯಯಗಳ ಸ್ವರೂಪ. ನಾನು ಆಯ್ಕೆ ಮಾಡಿಕೊಂಡಿರುವ ಅಧ್ಯಯನದ ವ್ಯಾಪ್ತಿ ಮತ್ತು ಸಂಶೋಧನೆಗೆ ಬಳಸುವ ವೈಧಾನಿಕತೆಯ ಕುರಿತು ವಿವರಣೆ ನೀಡಲಾಗಿದೆ.

ಅಧ್ಯಾಯ-ಎರಡು

ಈ ಅಧ್ಯಾಯದಲ್ಲಿ ಕರ್ನಾಟಕದಲ್ಲಿ ಭಿತ್ತಿಚಿತ್ರ/ಶಿಲ್ಪಕಲೆ ತುಂಬಾ ಪುರಾತನವಾದ ಇತಿಹಾಸವನ್ನು ಹೊಂದಿದೆ. ಹೊಸ ಹೊಸ ಪ್ರಯೋಗಗಳನ್ನು ರಚಿಸಲಾರಂಭಿಸಿದ ಅನೇಕ ಶತಮಾನಗಳ ಇತಿಹಾಸ ಹೊಂದಿದ ಕಾಲಕ್ಕೆ ತಕ್ಕ ಅನೇಕ ಬದಲಾವಣೆಗಳನ್ನು ಭಿತ್ತಿಚಿತ್ರ/ಶಿಲ್ಪಕಲೆಯಲ್ಲಿ ಕಾಣಬಹುದು. ಪ್ರಸ್ತುತ ಸಂದರ್ಭವನ್ನು ಗಮನಿಸಿದಾಗ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆಯಲ್ಲಿ ಹಲವಾರು ವಸ್ತುವಿಷಯ ಮಾಧ್ಯಮಗಳಲ್ಲಿ ಬದಲಾವಣೆಗಳನ್ನು ಕಾಣುತ್ತೇವೆ. ಸಮಕಾಲೀನ ಸಂದರ್ಭದಲ್ಲಿ ಬಹುತೇಕವಾಗಿ ಎಲ್ಲಾ ಮಾಧ್ಯಮಗಳಲ್ಲಿಯೂ ಕೂಡಾ ಈ ಆಧುನಿಕ ಚಿತ್ರ/ಶಿಲ್ಪ ಕಲೆಯನ್ನು ಕಾಣುತ್ತೇವೆ. ಅವುಗಳ ವರ್ಗೀಕರಣವನ್ನು ಈ ರೀತಿಯಾಗಿ ಮಾಡಲಾಗಿದೆ. ಭಿತ್ತಿಮಾಧ್ಯಮ ವರ್ಣಚಿತ್ರ ಗಾಜಿನ ಮಾಧ್ಯಮ, ಮಣ್ಣು ಮತ್ತು ಸಿಮೆಂಟ್ ಮಾಧ್ಯಮ ಫೈಬರ್ ಮತ್ತು ಮರ, ಸಂಕೀರ್ಣ ಮಾಧ್ಯಮಗಳಿರುವ ಭಿತ್ತಿಚಿತ್ರ/ಶಿಲ್ಪಕಲೆಯ ಅಧ್ಯಾಯವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಅಧ್ಯಾಯ-ಮೂರು

ಈ ಅಧ್ಯಾಯದಲ್ಲಿ ಭಿತ್ತಿ ಎಂದರೇನು? ಅದರ ಮೂಲ ಯಾವುದು? ಅದು ಕಾಲಕಳೆದಂತೆಲ್ಲಾ ಯಾವ ಯಾವ ರೀತಿಯಾಗಿ ಬದಲಾವಣೆಗಳನ್ನು ಕಂಡುಕೊಂಡಿತು? ಅದನ್ನು ರಚನೆ ಮಾಡುವಾಗ ಅನುಸರಿಸುವ ಕ್ರಮಗಳಾವವು ಇವುಗಳ ಬಗ್ಗೆ ಸಂಪೂರ್ಣವಾದ ಮಾಹಿತಿಯನ್ನು ಹಾಗೂ ಇದರಲ್ಲಿ ಬಳಸುವ ವಸ್ತುವಿಷಯ ಮತ್ತು ಪರಿಕರಗಳ ಬಗ್ಗೆ ~~ಈ ಅಧ್ಯಾಯದಲ್ಲಿ~~ ವಿವರಿಸಲಾಗಿದೆ.

---

೬೦. ಪುಷ್ಪ ದ್ರಾವೀಡ ಕಲಾವಿದ ಕೋರಿಚ್ ಮತ್ತು ಅವರ ಕಲಾಕೃತಿಗಳು : ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ. ೧೯೯೮

ಅಧ್ಯಾಯ-ನಾಲ್ಕು

ಈ ಅಧ್ಯಾಯದಲ್ಲಿ ವಿಜ್ಞಾನ ಕ್ಷೇತ್ರದಲ್ಲಿ ಪ್ರಭಾವ ಹೊಂದಿರುವ ಗಾಜನ್ನು ನಮ್ಮ ಕಲಾವಿದರು ಆಧುನಿಕ ಭಿತ್ತಿಚಿತ್ರಕ್ಕೆ ಬಳಸಿಕೊಂಡು ಭಿತ್ತಿಚಿತ್ರ ರಚಿಸಿರುವುದನ್ನು ಕಾಣುತ್ತೇವೆ. ಇದು ತುಂಬಾ ಕಡಿಮೆ ಖರ್ಚು ವೆಚ್ಚ ಮತ್ತು ಸರಳ ರೀತಿಯಲ್ಲಿ ರಚನೆಯಾಗುವ ಮಾಧ್ಯಮವಾಗಿರುವುದರಿಂದ ಪ್ರಸ್ತುತ ಸಂದರ್ಭದಲ್ಲಿ ತುಂಬಾ ಪ್ರಚಲಿತವಾಗಿ ಬೆಳೆದಿದೆ. ಇದರಲ್ಲಿ ಬಳಸುವಂತ ಪರಿಕರಗಳ ವಸ್ತುವಿಷಯವನ್ನು ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಅಧ್ಯಾಯ-ಐದು

ಈ ಅಧ್ಯಾಯದಲ್ಲಿ ಮಣ್ಣು ಮತ್ತು ಸಿಮೆಂಟ್ ಮಾಧ್ಯಮದಲ್ಲಿ ರಚನೆಯಾದ ಭಿತ್ತಿಶಿಲ್ಪಗಳು ಯಾವ ರೀತಿ ಬೆಳೆದುಕೊಂಡು ಬಂದಿತು. ಈ ಮಾಧ್ಯಮದಲ್ಲಿ ಆಧುನಿಕ ಕಲಾವಿದರು ಯಾವ ರೀತಿಯಾಗಿ ತಮ್ಮ ಶೈಲಿಯಲ್ಲಿ ಭಿತ್ತಿಶಿಲ್ಪಗಳನ್ನು ರಚಿಸಿಕೊಂಡು ಬರುತ್ತಿದ್ದಾರೆ. ಹೊಸ ರೀತಿಯಲ್ಲಿ ರಚನೆ ಮಾಡುವಂತಹ ವಿಧಾನ ಅದಕ್ಕೆ ಬಳಸುವಂತ ಸಾಮಾಗ್ರಿಗಳ ಕುರಿತು ಈ ಅಧ್ಯಾಯದಲ್ಲಿ ಹೇಳಲಾಗಿದೆ.

ಅಧ್ಯಾಯ-ಆರು

ಈ ಅಧ್ಯಾಯದಲ್ಲಿ ಫೈಬರ್ ಮತ್ತು ಮರ ಮಾಧ್ಯಮದ ಭಿತ್ತಿಶಿಲ್ಪವನ್ನು ಶ್ರೀಮಂತ ಮನೆತನಗಳಲ್ಲಿ ಮಠಗಳಲ್ಲಿ, ಚರ್ಚುಗಳಲ್ಲಿ, ಹೋಟಲ್, ಆಸ್ಪತ್ರೆ ಗ್ಯಾಲರಿಗಳಲ್ಲಿ ಹೆಚ್ಚಾಗಿ ಕಾಣಬಹುದು. ಆಧುನಿಕ ಕಲಾವಿದರು ಭಿತ್ತಿಶಿಲ್ಪ ರಚನೆಗೆ ಬಳಸುವ ಹಲವಾರು ಮಾಧ್ಯಮಗಳಲ್ಲಿ ಈ ಫೈಬರ್ ಮತ್ತು ಮರ ಮಾಧ್ಯಮವು ಒಂದಾಗಿದೆ. ಆದರೆ ಆಧುನಿಕವಾಗಿ ರಚನೆಯಾಗಿರುವಂತಹ ಮರದ ಮಾಧ್ಯಮದ ಶಿಲ್ಪಗಳು ಬಹಳ ಅಪರೂಪವಾಗಿರಬಹುದೆಂದು ಹೇಳಬಹುದಾಗಿದೆ. ಇದರಿಂದಾಗಿ ಭಿತ್ತಿಶಿಲ್ಪದಲ್ಲಿ ಬಳಸುವಂತಹ ಪರಿಕರಗಳು ಮತ್ತು ವಸ್ತು ವಿಷಯದ ಬಗ್ಗೆ ಹೇಳಲಾಗಿದೆ.

ಅಧ್ಯಾಯ-ಏಳು

ಈ ಅಧ್ಯಾಯದಲ್ಲಿ ವರ್ಣ ಪ್ಲಾಸ್ಟರ್ ಆಫ್ ಪ್ಯಾರಿಸ್, ಗಾಜು, ಫೈಬರ್, ಶಿಲ್ಪ ಮುಂತಾದ ಸಂಕೀರ್ಣ ಮಾಧ್ಯಮಗಳಲ್ಲಿ ಬಳಸುವಂತಹ ವಿವಿಧ ಬಗೆಯ ಭಿತ್ತಿಚಿತ್ರ/ಶಿಲ್ಪಗಳನ್ನು ರಚಿಸುತ್ತಿರುತ್ತಾರೆ. ಇಂತಹ ಹಲವಾರು ಮಾಧ್ಯಮಗಳನ್ನು ಬಳಸಿಕೊಂಡು ರಚಿಸುವಂತಹ ಭಿತ್ತಿಚಿತ್ರ/ಶಿಲ್ಪಕಲೆಗಳ ವಸ್ತುವಿಷಯ ಬಳಸುವ ಪರಿಕರಗಳ ಬಗ್ಗೆ ವಿವರವಾಗಿ ಅಧ್ಯಯನ ಕೈಗೊಳ್ಳಲಾಗಿದೆ.

ಅಧ್ಯಾಯ-ಎಂಟು

ಈ ಅಧ್ಯಾಯದಲ್ಲಿ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆ ಮೇಲಾದಂತಹ ಪ್ರಭಾವಗಳು ಇಂತಹ ಚಿತ್ರ ಶಿಲ್ಪಗಳನ್ನು ರಚಿಸಲು ಪ್ರೇರಣೆ ಇದರಲ್ಲಿ ಬಳಸುವಂತಹ ವಿವಿಧ ರೀತಿಯ ತಂತ್ರ. ಶೈಲಿಗಳನ್ನು ಕುರಿತು ಈ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

ಅಧ್ಯಾಯ-ಒಂಭತ್ತು

ಈ ಅಧ್ಯಾಯದಲ್ಲಿ ಆಧುನಿಕ ಭಿತ್ತಿಚಿತ್ರ/ಶಿಲ್ಪ ಕಲಾವಿದರುಗಳ ಸಂಕ್ಷಿಪ್ತ ಪರಿಚಯ ಜೊತೆಗೆ ಅವರು ರಚಿಸಿರುವಂತಹ ಭಿತ್ತಿಚಿತ್ರ/ಶಿಲ್ಪಕಲೆಯ ಕಲಾಕೃತಿಗಳ ಬಗ್ಗೆ ಮಾಹಿತಿ ಮತ್ತು ಕಲಾಕೃತಿಯನ್ನು ರಚನೆ ಮಾಡಿದಂತಹ ವಿಧಾನಗಳನ್ನು ಈ ಅಧ್ಯಾಯದಲ್ಲಿ ಹೇಳಲಾಗಿದೆ.

ಅಧ್ಯಾಯ-ಹತ್ತು

ಈ ಅಧ್ಯಾಯವು ಸಮಾರೋಪವಾಗಿದ್ದು, ಒಟ್ಟಾರೆ ಅಧ್ಯಾಯಗಳ ನೆಲೆಗಳನ್ನು ಮತ್ತು ವಿಮರ್ಶಾತ್ಮಕವಾದ ಫಲಿತಗಳನ್ನು ಪ್ರಚಾರ ಪಡಿಸುವ ಪ್ರಯತ್ನ ಇದಾಗಿದೆ.

## ಅಧ್ಯಯನದ ವ್ಯಾಪ್ತಿ

ಈ ಅಧ್ಯಯನವು ಕರ್ನಾಟಕದ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆ ಒಂದು ಅಧ್ಯಯನ ಎಂಬುವುದರ ಕುರಿತಾಗಿದೆ. ಇದರ ವ್ಯಾಪ್ತಿಯನ್ನು ಕರ್ನಾಟಕದ ಗುಲ್ಬರ್ಗಾ, ಮೈಸೂರು, ಬೆಂಗಳೂರು, ಬೆಳಗಾಂವಿ, ವಿಭಾಗಗಳಲ್ಲಿ ಕಂಡು ಬರುವಂತಹ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆ ಬಗ್ಗೆ ಮಾಹಿತಿಯು ಹೆಚ್ಚಾಗಿ ಸಿಗುತ್ತದೆ. ಈ ಹಿನ್ನೆಲೆಯಲ್ಲಿ ಈ ನೆಲೆಗಳನ್ನು ಸೀಮಿತಗೊಳಿಸಿಕೊಂಡು ಅಧ್ಯಯನವನ್ನು ಮಾಡಲಾಗಿದೆ.

ನಾನೊಬ್ಬ ದೃಶ್ಯಕಲಾ ವಿದ್ಯಾರ್ಥಿಯಾಗಿರುವುದರಿಂದ ಕರ್ನಾಟಕದ ಆಧುನಿಕ ಭಿತ್ತಿಚಿತ್ರ ಶಿಲ್ಪಗಳ ಬಗ್ಗೆ ಕಲಾತ್ಮಕ ದೃಷ್ಟಿಯಿಂದ ವಿವರಣೆ ನೀಡಲು ಬಯಸಿದ್ದೇನೆ. ಹೀಗಾಗಿ ನನ್ನ ಅಧ್ಯಯನದ ವ್ಯಾಪ್ತಿಯು ದೃಶ್ಯಕಲಾ ಕ್ಷೇತ್ರ ಹಿನ್ನೆಲೆಯಲ್ಲಿ ವ್ಯಾಪ್ತಿಯು ಒಳಗೊಂಡಿದೆ.

ನನ್ನ ಸಂಶೋಧನಾ ವಿಷಯವು ವಿಶಾಲವಾಗಿದ್ದು, ಹಾಗೂ ಒಂದು ವರ್ಷ ಕಾಲಾವಧಿ ಇರುವುದರಿಂದ ಕರ್ನಾಟಕದ ಮುಖ್ಯವಾದ ಸ್ಥಳಗಳಲ್ಲಿ ದೊರೆತಂತಹ ಕೆಲವು ಭಿತ್ತಿಚಿತ್ರ ಶಿಲ್ಪಗಳನ್ನು ಆಯ್ಕೆ ಮಾಡಿಕೊಂಡ ಹಿನ್ನೆಲೆಯಲ್ಲಿ ಈ ವ್ಯಾಪ್ತಿಯು ಒಳಗೊಂಡಿದೆ.

## ಅಧ್ಯಯನದ ವೈಧಾನಿಕತೆ

ಈ ಅಧ್ಯಯನಕ್ಕೆ ಎರಡು ರೀತಿಯ ವಿಧಾನಗಳನ್ನು ಬಳಸಲಾಗಿದೆ.

೧. ಮೂಲ ಆಕರ ಸಾಮಾಗ್ರಿಗಳು

೨. ಆನುಷಂಗಿಕ ಆಕರ ಸಾಮಾಗ್ರಿಗಳು

### ೧. ಮೂಲ ಆಕರ ಸಾಮಾಗ್ರಿಗಳು

ಒಂದು ನಾಡಿನ ಸಾಂಸ್ಕೃತಿಕ ಇತಿಹಾಸ ಕಲೆ ಜನಜೀವನಗಳಂತಹ ವಿಷಯಗಳ ಬಗ್ಗೆ ಸಂಶೋಧನೆ ಮಾಡುವಾಗ ಕ್ಷೇತ್ರಕಾರ್ಯ ಅನಿವಾರ್ಯವಾಗುತ್ತದೆ. ಇದು ಮೂಲ ಆಕರ ಸಾಮಾಗ್ರಿಗಳಿಂದ ಮಾಹಿತಿ ಸಂಗ್ರಹಿಸಲು ಸುಲಭ ಮಾರ್ಗವಾಗಿದೆ. ಈ ಅಧ್ಯಯನಕ್ಕೆ ಮೂಲ ಆಕರ ಸಾಮಾಗ್ರಿಯಾಗಿ ಮೂಲ ಭಿತ್ತಿ ಚಿತ್ರ/ಶಿಲ್ಪಕಲೆಗಳನ್ನು ಬಳಸಿಕೊಳ್ಳಲಾಗಿದೆ.

ಈ ಅಧ್ಯಯನದಲ್ಲಿ ಕ್ಷೇತ್ರಕಾರ್ಯವು ಛಾಯಾಚಿತ್ರಣ ಮಾಡುವುದು, ಕೆಲವು ಸಲ ಮೂಲ ಚಿತ್ರದ ಎದುರು ಕುಳಿತು ಅದಕ್ಕೆ ಸಂಬಂಧ ಪಟ್ಟ ಮಾಹಿತಿಯನ್ನು ಅದೇ ಸ್ಥಳದಲ್ಲಿ ಬರೆದುಕೊಳ್ಳಲಾಯಿತು. ಈ ಕ್ಷೇತ್ರಕಾರ್ಯದಲ್ಲಿ ಹಲವಾರು ವಿದ್ವಾಂಸರು ಹಿರಿಯರು ಜೊತೆಗೆ ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಕ್ಷೇತ್ರಕಾರ್ಯಕ್ಕೆ ಹೊರಡುವ ಮುನ್ನ ಎಲ್ಲಾ ರೀತಿಯ ಪೂರ್ವ ತಯಾರಿ ಮಾಡಿಕೊಳ್ಳಲಾಯಿತು. ಹೊರಡಬೇಕಾದರೆ ಊರು ಅಲ್ಲಿ ನೋಡಬೇಕಾದ ಸ್ಥಳ ಎಲ್ಲೆಲ್ಲಿ ನಮಗೆ ಬೇಕಾಗುವಂತಹ ಭಿತ್ತಿಚಿತ್ರ ಶಿಲ್ಪಗಳಿವೆ ಎಂದು ಮೊದಲೇ ಪಟ್ಟಿಕೆಗಳಲ್ಲಿ ಬರೆದಿಟ್ಟುಕೊಂಡು ಸಂದರ್ಶಿಸುವ ಸ್ಥಳಗಳ ಬಗ್ಗೆ ಈಗಾಗಲೇ ಪ್ರಕಟವಾಗಿರುವ ಐತಿಹಾಸಿಕ ಸಾಂಸ್ಕೃತಿಕ ವಿವರಗಳನ್ನು ಅಭ್ಯಾಸಿ ಅಗತ್ಯವಿರುವ ಅಂಶಗಳನ್ನು ಗುರುತು ಹಾಕಿಕೊಂಡು ಅಧ್ಯಯನ ನಡೆಸಲಾಗಿದೆ.

**೨. ಅನುಷಂಗಿಕ ಆಕರ ಸಾಮಾಗ್ರಿಗಳು**

ಸಂಶೋಧನಾ ಮಹಾಪ್ರಬಂಧಗಳು ಪ್ರಕಟಿತ, ಅಪ್ರಕಟಿತ ಸಾಹಿತ್ಯ ಕೃತಿಗಳು, ವಿಶ್ವಕೋಶಗಳು, ಅನುವಾದ ಗ್ರಂಥಗಳು ಸಂಶೋಧನಾ ಲೇಖನಗಳು, ಪತ್ರಿಕೆಗಳು, ಸಂಪಾದನಾ ಗ್ರಂಥ ಮುಂತಾದವುಗಳನ್ನು ಅನುಷಂಗಿಕ ಆಕರ ಸಾಮಾಗ್ರಿಗಳಾಗಿ ಬಳಸಿಕೊಳ್ಳಲಾಗಿದೆ. ಹಾಗೆಯೇ ಬೇರೆ ಬೇರೆ ಸ್ಥಳಗಳ ಗ್ರಂಥಾಲಯಗಳು ವಸ್ತುಸಂಗ್ರಹಾಲಯಗಳು ಕಲಾಶಾಲೆಗಳು ಮತ್ತು ಕಲಾಪ್ರದರ್ಶನಗಳು ಹೀಗೆ ಅನೇಕ ಕಡೆಗಳಿಗೆ ಭೇಟಿ ನೀಡಿ ವಿಷಯ ಸಂಗ್ರಹಿಸಲಾಗಿದೆ.

ಕ್ಷೇತ್ರಕಾರ್ಯದಿಂದ ದೊರೆತ ಮೂಲ ಆಕರ ಸಾಮಾಗ್ರಿ ಮಾಹಿತಿಯನ್ನು ಪಟ್ಟಿಕೆಗಳಲ್ಲಿ ಸಂಗ್ರಹಿಸಿಕೊಂಡಂತೆ ಅನುಷಂಗಿಕ ಮಾಹಿತಿಯ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಈ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

* * *

ಅಧ್ಯಾಯ - ಎರಡು

# ಭಿತ್ತಿಚಿತ್ರ/ಶಿಲ್ಪಕಲೆ ಮಾಧ್ಯಮದ ನೆಲೆ-ಹಿನ್ನೆಲೆ ಮತ್ತು ಸಮಕಾಲೀನ ಸಂದರ್ಭ ಮತ್ತು ಅವುಗಳ ವರ್ಗೀಕರಣ

ಭಿತ್ತಿಚಿತ್ರ ಮತ್ತು ಶಿಲ್ಪಕ್ಕೆ ಸಾವಿರಾರು ವರ್ಷಗಳ ಇತಿಹಾಸ ಹೊಂದಿರುವುದನ್ನು ಕಾಣಬಹುದು. ಇಂತಹ ಒಂದು ಪರಂಪರೆಯು ಆದಿಮಾನವನ ಕಾಲದಿಂದಲೂ ಬೆಳೆದುಕೊಂಡು ಬಂದಿದೆ. ಇವುಗಳ ಇತಿಹಾಸ ಮತ್ತು ಅದರ ಹಿನ್ನೆಲೆಯನ್ನು ಈ ಮುಂದೆ ಕಾಣಬಹುದಾಗಿದೆ. ಚಿತ್ರ ಶಿಲ್ಪದಲ್ಲಿ ಕಾಲಕ್ರಮೇಣವಾಗಿ ಅನೇಕ ಬದಲಾವಣೆಗಳನ್ನು ಕಂಡುಕೊಳ್ಳುತ್ತಾ ಹೊಸ ಹೊಸ ಪ್ರಯೋಗಗಳನ್ನು ಸೃಜನಾತ್ಮಕವಾಗಿ ಕಾಣಬಹುದಾಗಿದೆ. ಭಿತ್ತಿಚಿತ್ರಗಳನ್ನು ಶಿಲ್ಪಗಳಿಗೆ ಸಂಬಂಧಿಸಿದಂತೆ ಅದರ ಹಿನ್ನೆಲೆಯು ಸಹ ರಚನೆ ಮಾಡುತ್ತಿರುವುದನ್ನು ಕಾಣಬಹುದು. ಈ ರೀತಿ ರಚನೆ ಮಾಡುವುದರಿಂದಾಗಿ ಶಿಲ್ಪದ ಸೌಂದರ್ಯವು ಹೆಚ್ಚಿದಂತಾಗುತ್ತದೆ.

ಭಿತ್ತಿ ಚಿತ್ರಗಳು ಅತ್ಯಂತ ಪುರಾತನ ಕಾಲದಿಂದಲೇ ಭಾರತದಲ್ಲಿ ಕಂಡುಬರುತ್ತವೆ. ಮಧ್ಯಪ್ರದೇಶದ ಬೆಂಬೆಟ್ಕಾ ಪ್ರದೇಶದಲ್ಲಿ ಕ್ರಿ.ಪೂ.೨೫೦೦ ವರ್ಷಗಳಷ್ಟು ಪುರಾತನವಾದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಿವೆ. ಭಾರತದಲ್ಲಿ ಪ್ರಸಿದ್ಧವಾದ ಸಿಂಧೂ ನಾಗರಿಕತೆಯ ಕಾಲದಲ್ಲಿ ಜನರು ತಮ್ಮ ವಾಸ್ತುಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುತ್ತಿದ್ದರು. ಮಹಾರಾಷ್ಟ್ರದ ಜುನ್ನಾರ ಪಟ್ಟಣದಿಂದ ನೈರುತ್ಯಕ್ಕೆ ಎರಡು ಮೈಲು ದೂರದಲ್ಲಿರುವ ತುಳಜಾ ಗುಹೆಗಳಲ್ಲಿ ಕ್ರಿ.ಶ.೩ನೇ ಶತಮಾನದ ಭಿತ್ತಿಚಿತ್ರಗಳನ್ನು ಕಾಬಹುದಾಗಿದೆ.[೧]

ಕರ್ನಾಟಕದಲ್ಲಿ ಕಾಲಮಾನದಿಂದ ಅತ್ಯಂತ ಪುರಾತನ ಭಿತ್ತಿಚಿತ್ರಗಳು ಬಾದಾಮಿ ಬಳಿ ಇರುವ ಅರೆಗಡ್ಡೆ ಹೀರೆಗುಡ್ಡ ಎಂಬಲ್ಲಿಯ ಕಲ್ಲಾಸೆರೆಯಲ್ಲಿ ಮತ್ತು ಬೆಳಗಾಂವ ಜಿಲ್ಲೆಯ ರಾಮದುರ್ಗದ ಪಶ್ಚಿಮಕ್ಕೆ ೩ ಕಿ.ಮೀ ದೂರದಲ್ಲಿರುವ ಮುಗುಂಡೇಶ್ವರ ದೇವಾಲಯ ಬಳಿಯ ಖಾಜೀಗುಡ್ಡದಲ್ಲಿ ಕಂಡುಬರುತ್ತದೆ. ನಂತರ ನೂತನ ಶಿಲಾಯುಗ, ಶಿಲಾತಾಮ್ರಯುಗ ಕಾಲದಲ್ಲಿ ಕ್ರಿ.ಪೂ.೨೦೦ ವರ್ಷಗಳ ಅವಧಿಗೆ ಸೇರಿದೆ.

೧. ಬಸೀರ್ ಅಹ್ಮದ್, ವಾಚ್‌ಮೇಕರ್ : ನರಗುಂದದ ಭಿತ್ತಿಚಿತ್ರಗಳು, ಪುಟ-೧೪

ಭಿತ್ತಿಚಿತ್ರಗಳು ಕೊಪ್ಪಳ, ಗಂಗಾವತಿ ತಾಲೂಕಿನ ಹೀರೆ ಬೆನಕಲ್, ಅಂಜನಹಳ್ಳಿ, ತಿಮ್ಮಾಪೂರ, ನಾರಾಯಣಪುರ, ಬಂಡಿಹರ್ಲಾಪೂರ, ಚಿಕ್ಕರಾಮಪುರ, ಲಿಂಗಸೂರ ತಾಲೂಕಿನ ಪಿಕ್ಕಿಹಾಳ, ಮಸ್ಕಿ, ತಾವರೆಗೇರೆ ಭಿಲ್ಲಮರಾಯನ ಗುಡ್ಡಗಳಲ್ಲಿ ಮೊಳಕಾಲ್ಮೂರು ತಾಲೂಕಿನ ಜಟ್ಟಿಂಗ ರಾಮೇಶ್ವರ ಮುಂತಾದ ಕಡೆಗಳಲ್ಲಿ ಕಂಡುಬರುತ್ತದೆ.

ಕರ್ನಾಟಕದ ಪ್ರಾಗೈತಿಹಾಸಿಕ ಚಿತ್ರಗಳು ಇವಾದರೆ ಶಿಷ್ಟಪರಂಪರೆಯ ಭಿತ್ತಿಚಿತ್ರಗಳ ಬೆಳವಣಿಗೆಯನ್ನು ಸಾಮಾನ್ಯವಾಗಿ ಬಾದಾಮಿಯ ವೈಷ್ಣವ ಗುಹೆಯ ಚಾಲುಕ್ಯರ ಭಿತ್ತಿಚಿತ್ರಗಳಿಂದ ಪ್ರಾರಂಭವಾಗುವುದು. ಸೂಕ್ಷ್ಮವಾಗಿ ಗಮನಿಸಿದಾಗ ಕರ್ನಾಟಕದ ಶಿಷ್ಟಪರಂಪರೆಯ ಭಿತ್ತಿಚಿತ್ರಕಲೆಯ ಇನ್ನೂ ಪುರಾತನವೆಂದೇ ಹೇಳಬಹುದು. ಕ್ರಿ.ಪೂ.೩ನೇ ಶತಮಾನದಿಂದ ಕ್ರಿ.ಶ.೩ನೇ ಶತಮಾನದ ಇಂದಿನ ಕರ್ನಾಟಕದ ಬಹುಭಾಗವನ್ನು ಒಳಗೊಂಡಿತು. ಈ ದೃಷ್ಟಿಯಿಂದ ನೋಡಿದಾಗ ಶಾತವಾಹನರ ಕಾಲದಲ್ಲಿ ಅಜಂತ, ನಾಸಿಕ, ಬೇಡ್ಸ್, ಜಾಜಾ, ಕೊಂಡಾನೆ, ಕಾರ್ಲೆ ಸ್ಥಳಗಳಲ್ಲಿ ಗುಹಾಲಯಗಳನ್ನು ಕರ್ನಾಟಕದ ಶಿಷ್ಟಪದ ಚಿತ್ರಕಲೆಯ ಹಳೆಮೆಯ ಪುರಾತನತೆಯ ಕ್ರಿ.ಶ.೬ನೇ ಶತಮಾನದ ಶಾತವಾಹನದ ಕಾಲಕ್ಕೆ ಹಿಂದೆ ಸರಿಯುತ್ತದೆ. ಕ್ರಿ.ಶ.೪ನೇ ಶತಮಾನದಲ್ಲಿ ರಾಜ್ಯ ಸ್ಥಾಪಿಸಿ. ಅಳ್ವಿಕೆ ಪ್ರಾರಂಭಿಸಿದ ಕದಂಬರ ಕಾಲದ ಯಾವುದೇ ಭಿತ್ತಿಚಿತ್ರ ನಿದರ್ಶನಗಳು ಉಳಿದಿಲ್ಲ. ಆದರೆ ಆದಾಗಲೂ ಭಿತ್ತಿಚಿತ್ರ ರಚನೆ ನಡೆದಿರಬಹುದೆಂದು, ಕ್ರಿ.ಶ.೬ನೇ ಶತಮಾನದಲ್ಲಿ ಬಾದಾಮಿಯಲ್ಲಿ ಮತ್ತೆ ಭಿತ್ತಿಚಿತ್ರ ರಚನೆ ನಡೆದದ್ದು ಕಂಡುಬರುತ್ತದೆ. ಚಾಲುಕ್ಯರ ಮಂಗಳೇಶನ ಕಾಲದ ವೈಷ್ಣವ ಗುಹೆಯ ಭಿತ್ತಿಚಿತ್ರಗಳಲ್ಲದೇ ಅದಕ್ಕಿಂತಲೂ ಪೂರ್ವದ ಶಿಷ್ಟಪರಂಪರೆಯ ಭಿತ್ತಿಚಿತ್ರಗಳು ಬಾದಾಮಿಯ ಸುತ್ತಮುತ್ತ ಪತ್ತೆಯಾಗಿವೆ. ಕ್ರಿ.ಶ.೧೦ನೇ ಶತಮಾನದಲ್ಲಿ ರಚನೆಯಾದ ಸಾಹಿತ್ಯವು ಆಕಾಲದಲ್ಲಿದ್ದ ಭಿತ್ತಿ ಚಿತ್ರಗಳ ಬಗ್ಗೆ ಹೇಳುತ್ತದೆ. ಕ್ರಿ.ಶ.೧೪ನೇ ಶತಮಾನದಲ್ಲಿ ವಿಜಯನಗರದ ಸಾಲು ಪಟ್ಟಿಕೆಗಳ ಶಿಲ್ಪಗಳನ್ನು ಕ್ರಿ.ಶ.೧೬ನೇ ಶತಮಾನದಲ್ಲಿ ಮತ್ತೆ ಕರ್ನಾಟಕದಲ್ಲಿ ಹೆಚ್ಚಾಗಿ ಭಿತ್ತಿಚಿತ್ರರಚನೆಯಾಗಿರುವುದು ಕಂಡುಬರುತ್ತದೆ. ಹಂಪಿಯ ವಿರೂಪಾಕ್ಷ ದೇವಾಲಯದ ಮೇಲ್ಛಾವಣಿಯಲ್ಲಿ ನೋಡಬಹುದು. ಕ್ರಿ.ಶ.೧೮ನೇ ಶತಮಾನದಲ್ಲಿ ಅತಿ ಹೆಚ್ಚಾಗಿ ರಚನೆಯಾಗಿವೆ. ಶ್ರವಣಬೆಳಗೊಳ ಚಾರುಕೀರ್ತಿ ಪಂಡಿತಾಚಾರ್ಯ ಮಠದಲ್ಲಿ ಮತ್ತು ಮಠದ ಸಮೀಪವಿರುವ ಮಂಟಪಗಳಲ್ಲಿಯೂ ಸಹ ಕಾಣಬಹುದು.[೨]

ಕರ್ನಾಟಕದಲ್ಲಿ ಕ್ರಿ.ಶ.೧೯ನೆಯ ಶತಮಾನದ ಭಿತ್ತಿಚಿತ್ರಗಳ ಅತಿ ದೊಡ್ಡ ಬಂಗಾಳ ಕೋಟೆಯಲ್ಲಿರುವ ವರಾಹಸ್ವಾಮಿ ಮತ್ತು ಪ್ರಸನ್ನಸ್ವಾಮಿ ದೇವಾಲಯ ಹಾಗೂ ಕೋಟೆಯ ಹೊರಗಿರುವ ವೆಂಕಟರಮಣಸ್ವಾಮಿ ದೇವಾಲಯಗಳಲ್ಲಿ ಮೈಸೂರು ಅರಸರು ಬರೆಸಿದ ಈ ಕಾಲದ ಭಿತ್ತಿಚಿತ್ರಗಳಿವೆ. ಹೀಗೆ ನಮ್ಮ ನಾಡು ವೈಭವಯುತ ಸುಂದರ ಭಿತ್ತಿಚಿತ್ರಗಳಿವೆ. ಹೀಗೆ ನಮ್ಮ ಕರ್ನಾಟಕವು ವೈಭವಯುತ ಸುಂದರ ಭಿತ್ತಿಚಿತ್ರಗಳನ್ನು ಹೊಂದಿದ ಕಲಾಕ್ಷೇತ್ರವಾಗಿದೆ ಎಂದರೆ ತಪ್ಪಾಗಲಿಕ್ಕಿಲ್ಲ.

---

೨. ಬಸೀರ್ ಅಹ್ಮದ್, ವಾಚ್‌ಮೇಕರ್ : ನರಗುಂದದ ಭಿತ್ತಿಚಿತ್ರಗಳು, ಪುಟ-೧೫

## ಕರ್ನಾಟಕದಲ್ಲಿ ಭಿತ್ತಿಚಿತ್ರ ಬೆಳೆದು ಬಂದ ಹಿನ್ನೆಲೆ

ಕಾಲ ಬದಲಾದಂತೆಲ್ಲಾ ಚಿತ್ರಕಲೆಯಲ್ಲಿಯೂ ಸಹ ಅನೇಕ ರೀತಿಯ ಬದಲಾವಣೆಗಳನ್ನು ಗಮನಿಸಬಹುದಾಗಿದೆ. ಅಂದಿನ ಕಲಾವಿದರು ರಚನೆ ಮಾಡಿದಂತಹ ಭಿತ್ತಿಚಿತ್ರಗಳ ಶೈಲಿ ಮತ್ತು ತನ್ನದೇ ಆದ ಮಾಧ್ಯಮದಲ್ಲಿ ವಿಶಿಷ್ಟವಾದಂತಹ ಬದಲಾವಣೆಗಳನ್ನು ಮಾಡಿದ್ದಾರೆ. ಭಿತ್ತಿಚಿತ್ರಗಳನ್ನು ರಾಜ ಮಹಾರಾಜರು, ಶ್ರೀಮಂತ ವರ್ಗದವರು, ಧರ್ಮಗುರುಗಳು, ಭಿತ್ತಿಚಿತ್ರಗಳನು ರಚಿಸಿಕೊಳ್ಳುತ್ತಿದ್ದರು. ಆದರೆ ಕೆಲವು ವರ್ಷಗಳಿಂದ ಕಲಾಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಭಿತ್ತಿಚಿತ್ರಕಲೆಯನ್ನು ಬೋಧಿಸುವುದರ ಮೂಲಕ ಆಧುನಿಕ ಯುಗದಲ್ಲಿ ಭಿತ್ತಿಚಿತ್ರಕಲೆಗೆ ವಿಶೇಷವಾದಂತಹ ಪ್ರೋತ್ಸಾಹವನ್ನು ನೀಡಿದ್ದಾರೆ. ಸಮಕಾಲೀನ ಸಂದರ್ಭದಲ್ಲಿ ಅನೇಕ ಮಾಧ್ಯಮದಲ್ಲಿ ಭಿತ್ತಿಚಿತ್ರಗಳು ರಚನೆಯಾಗುತ್ತಿರುವುದು ಕಂಡುಬರುತ್ತದೆ. ಅದರಲ್ಲಿ ಭಿತ್ತಿಚಿತ್ರಗಳು ಶಿಲಾ ಮಾಧ್ಯಮದ ಭಿತ್ತಿಚಿತ್ರ ಶಿಲ್ಪಗಳು, ಲೋಹ ಮಾಧ್ಯಮದ ಭಿತ್ತಿಚಿತ್ರ ಶಿಲ್ಪಗಳು ಗಾಜು ಮಾಧ್ಯಮದ ಭಿತ್ತಿಚಿತ್ರಗಳು ಫೈಬರ್ ಮಾಧ್ಯಮದ ಶಿಲ್ಪಗಳು ಮರ ಮಾಧ್ಯಮದ ಭಿತ್ತಿಶಿಲ್ಪಗಳು ಮತ್ತು ಸಂಕೀರ್ಣ ಮಾಧ್ಯಮದ ಭಿತ್ತಿಚಿತ್ರ/ಶಿಲ್ಪಗಳು ಹೀಗೆ ವಿವಿಧ ರೀತಿಯಲ್ಲಿ ವೈವಿಧ್ಯಮಯವಾಗಿ ಭಿತ್ತಿಚಿತ್ರ/ಶಿಲ್ಪಗಳು ರಚನೆಯಾಗುತ್ತಿರುವುದನ್ನು ನಾವು ಗಮನಿಸಬಹುದಾಗಿದೆ.

ಹೀಗೆ ಅನೇಕ ಮಾಧ್ಯಮಗಳಲ್ಲಿ ಇಂದಿನ ಆಧುನಿಕ ಕಲಾವಿದರು ಬಹು ವೈವಿಧ್ಯಮಯವಾಗಿ ವಿಶಿಷ್ಟವಾದ ರೂಪಗಳಲ್ಲಿ ರಚನೆ ಮಾಡುತ್ತಿರುವುದು ಕಂಡುಬರುತ್ತದೆ. ಇಂದಿನ ಆಧುನಿಕ ಭಿತ್ತಿಚಿತ್ರಕಲೆಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅನೇಕ ಕಲಾತ್ಮಕ ಅಂಶಗಳು ನಮಗೆ ಬಿಂಬಿಸುತ್ತವೆ. ಅವು ಭಿತ್ತಿಚಿತ್ರಕಲೆಯ ರಚನೆಯಲ್ಲಾಗಿರಬಹುದು ಇವುಗಳಲ್ಲಿ ಅನೇಕ ಅಂಶಗಳನ್ನು ಗಮನಿಸಬಹುದಾಗಿದೆ.

ಶಿಲ್ಪಕೃತಿ ಘನ ಮಾಧ್ಯಮವನ್ನು ಕೆತ್ತಿ ತೆಗೆದು ನಿರ್ದಿಷ್ಟ ಸ್ವರೂಪಕ್ಕೆ ರೂಪಾಂತರಗೊಳ್ಳುವವರೆಗೆ ಪ್ರಯತ್ನಿಸುವ ಪ್ರಕ್ರಿಯೆಯಾದರೆ ಚಿತ್ರಕಲಾಕೃತಿ ಸಮತಲದ ಬಟ್ಟೆ, ಗೋಡೆ, ಕಾಗದ ಇತ್ಯಾದಿಗಳ ಮೇಲೆ ಬಣ್ಣದ ವಿಭಿನ್ನ ಮೈಲ್ಮೈ ಪದರಗಳನ್ನು ಸೃಷ್ಟಿಸಲು ಸಾಧ್ಯವಾಗುವ ಪರಿಕರಗಳನ್ನು ಹಚ್ಚಿ ಅಥವಾ ಅಂಟಿಸಿ ನಿರ್ದಿಷ್ಟವಾದ ಚಿತ್ರಕಲಾಕೃತಿಯನ್ನು ರಚಿಸುವಂತಹದು. ಈ ಎರಡು ಸಾಧ್ಯತೆಗಳ ಸಮ್ಮಿಶ್ರಣವಾಗಿ ಮ್ಯೂರಲ್ ಮಾಧ್ಯಮ ರೂಪಗೊಂಡಿತು. ಆಧುನಿಕವಾಗಿ ಅನೇಕ ರೀತಿಯ ಮಿಶ್ರಮಾಧ್ಯಮಗಳ ಬಳಕೆಯಿಂದ ವಿಶಿಷ್ಟವಾದ ಒಂದು ಹೊಸ ಆವಿಷ್ಕಾರದ ಕಲಾಭಿವ್ಯಕ್ತಿಯಾಗಿ ಮ್ಯೂರಲ್ ಭಿತ್ತಿಚಿತ್ರ/ಶಿಲ್ಪ ಮಾಧ್ಯಮ ಜನಪ್ರಿಯತೆಯನ್ನು ಸಾಧಿಸಿತು.[೩]

ಆಧುನಿಕ ಕರ್ನಾಟಕದಲ್ಲಿ ಉಬ್ಬು ಶಿಲ್ಪದ ಪ್ರಯೋಗಗಳು ಸಾಂಪ್ರದಾಯಿಕ ನೆಲೆಯಲ್ಲಿ ಶಿಸ್ತುಬದ್ಧ ಕೃತಿ ರಚನೆಯಾಗಿ ಅಲ್ಲಲ್ಲಿ ನಡೆಯುತ್ತಿತ್ತು. ಇಂದಿನ ಮ್ಯೂರಲ್ ಎಂಬ ಆಧುನಿಕ ಪರಿಕಲ್ಪನೆಯ ಮಾದರಿಗೆ ಆ ಪ್ರಯತ್ನಗಳು ತಳಹದಿಯಾಗಿ ವಾಸ್ತವವಾಗಿ ಪ್ರಸ್ಕೋ ಎಂಬುವುದು ಚಿತ್ರ ಸಂಬಂಧಿತರಾಗಿ ಮ್ಯೂರಲ್‌ಶಬ್ದ

೩. ಡಾ.ಎಂ.ಎಸ್.ಮೂರ್ತಿ : ಆಧುನಿಕ ಭಿತ್ತಿರೂಹುಗಳು (ಮ್ಯೂರಲ್), ಪುಟ-೨೭೨

ಭಿತ್ತಿಚಿತ್ರ ಮತ್ತು ಉಬ್ಬುಚಿತ್ರ ಎಂಬ ಎರಡು ಅರ್ಥಗಳಲ್ಲಿ ಬಳಕೆಯಾಗುತ್ತಿತ್ತು. ಕಾಲಾನಂತರದಲ್ಲಿ ನವ್ಯ ಪರಂಪರೆಯ ಅನೇಕ ಹೊಸ ಹೊಸ ಆಲೋಚನೆಗಳ ಆವಿಷ್ಕಾರದ ಪ್ರಭಾವದಿಂದ ಕಲಾಭಿವ್ಯಕ್ತಿಯು ವಿಭಿನ್ನವಾದ ದಾರಿಯಲ್ಲಿ ಸಾಗಿದಂತೆ ಮ್ಯೂರಲ್ ಮಾಧ್ಯಮದ ಮೇಲೂ ಪರಿಣಾಮವಾಯಿತು. ಕಾರಣದಿಂದಾಗಿ ಮ್ಯೂರಲ್ ಮಾಧ್ಯಮ ಸಾಂಪ್ರದಾಯಿಕವಾದ ನೆಲೆಯನ್ನು ದಾಟಿ ನಿರ್ಬಿಡೆಯಿಂದ ಸಾಗಿ ಮುಂದೆ ಹೊಸ ಪ್ರಯೋಗಗಳಿಗೆ ನಾಂದಿಯಾಯಿತು.

ಕರ್ನಾಟಕದಲ್ಲಿ ನವ್ಯ ಮಾದರಿಯ ಮ್ಯೂರಲ್ ಕೃತಿಗಳು ರಚನೆಯಾಗಿರುವುದನ್ನು ಸಹ ನಾವು ಕಾಣಬಹುದು. ದೊಡ್ಡ ಕಟ್ಟಡದ ಗೋಡೆಯ ಮೇಲೆ ಬಣ್ಣ ಬಣ್ಣದ ಗಾಜಿನ ಚೂರು, ಮರಳು, ಲೋಹ, ಇತ್ಯಾದಿ ಮಾಧ್ಯಮದ ಸಾಮಾಗ್ರಿಗಳನ್ನು ಬಳಸಿ ವಿಶಿಷ್ಟವಾದ ಪರಿಣಾಮದ ಮ್ಯೂರಲ್‌ಗಳನ್ನು ರಚನೆ ಮಾಡಿ ತಾಮ್ರದ ತಗಡಿನಲ್ಲಿಯೂ ಉಬ್ಬುಶಿಲ್ಪ ಭಿತ್ತಿರುಹುಗಳನ್ನು ಅತ್ಯಂತ ಸೂಕ್ಷ್ಮವಾಗಿ ಕೌಶಲ್ಯದಿಂದ ಕೂಡಿದ ಪ್ರಯೋಗಾತ್ಮಕ ಕೃತಿಗಳನ್ನು ಕರ್ನಾಟಕ ಆಧುನಿಕ ಭಿತ್ತಿಚಿತ್ರಗಳಲ್ಲಿ ನೋಡಬಹುದು. ಈ ಕೃತಿಯಲ್ಲಿ ವೃತ್ತಿಪರತೆ ಎದ್ದು ಕಾಣುವ ಅಂಶವಾಗಿತ್ತು. ಅಲ್ಲದೇ ಅವು ಸಂವೇಧನಾ ಶೀಲ ಅಭಿವ್ಯಕ್ತಿಯಾಗಿ ಮ್ಯೂರಲ್ ಎನ್ನಬಹುದಾದ ಕೃತಿಗಳನ್ನು ಹೆಚ್ಚಾಗಿ ಕಾಣಬಹುದು. ಅಲ್ಯುಮಿನಿಯಂ ತಗಡಿನ ಮೇಲೆ ಉಬ್ಬು ತಗ್ಗು ಸೃಷ್ಟಿಸಿ ಅನಂತರ ಅದರ ಮೇಲೆ ಬಣ್ಣಗಳನ್ನು ಬಳಸಿ ಆಕರ್ಷಣೆಯನ್ನು ಹೆಚ್ಚಿಸಲು ಅನೇಕ ಕಲಾವಿದರು ತಮ್ಮ ಜೀವನವನ್ನು ಕಳೆಯುತ್ತಿದ್ದಾರೆ. ಸಾಂಪ್ರದಾಯಿಕ ರೂಪದ ಸದೃಶ್ಯ ನೆಲೆಯ ಬೃಹತ್ ಮ್ಯೂರಲ್‌ಗಳನ್ನು ರಚಿಸಿ ಟೆರ್ರಾಕೋಟ, ಪೈಬರ್‌ಗ್ಲಾಸ್ ಮತ್ತು ಮಿಶ್ರಣ ಮಾಧ್ಯಮಗಳಲ್ಲಿ ನವ್ಯ ಸಂಯೋಜನೆಯ ಕೆಲವು ಕೃತಿಗಳು ಮುಖ್ಯ ಪ್ರಯೋಗಗಳಾಗಿವೆ.

೧೯೮೦-೯೦ರ ದಶಕದಲ್ಲಿ ಮ್ಯೂರಲ್ ಮಾಧ್ಯಮ ಅಥವಾ ಭಿತ್ತಿರೂಹು ವಿಶಿಷ್ಟ ಸಾಧ್ಯತೆಗಳಿಗೆ ತೆರೆದುಕೊಳ್ಳುತ್ತಲೇ ಸೃಜನಶೀಲ ಅಭಿವ್ಯಕ್ತಿಗೆ ಒಂದು ಹೊಸ ಆಯಾಮ ಸೃಷ್ಟಿಸುವಲ್ಲಿ ಯಶಸ್ವಿಯಾಯಿತು. ಈ ಯಶಸ್ಸಿಗೆ ಅಂದಿನ ಕಲಾವಿದರ ನಿಷ್ಠೆ, ಬದ್ಧತೆ, ಶಿಸ್ತು, ಸಾವಧಾನಗಳು ಕಾರಣ ಸಂಪ್ರದಾಯವನ್ನು ಅರಗಿಸಿಕೊಂಡು ನವ್ಯಮಾರ್ಗದಲ್ಲಿ ಸಂಚರಿಸಿದ ಮೌಲಿಕ ಕೃತಿಗಳು ರಚನೆಯಾದವು. ಇಂತಹ ಬೆಳವಣಿಗೆಯಿಂದ ಸಾಮಾಜಿಕವಾಗಿ ಶಿಷ್ಟತೆಯ ಸ್ಥಾಪನೆ ಪಡೆದಿದ್ದ, ಕಲಾವಲಯ ಕಲಾಸಕ್ತ ಜನರ ಕುತೂಹಲಕ್ಕೆ ಕಾರಣವಾಗಿ ಉದ್ಯಮ ವಾಸ್ತುಶಿಲ್ಪಿಗಳು ಮೊದಲಾದವರು ಈ ಮಾಧ್ಯಮ ಕುರಿತಂತೆ ಆಸಕ್ತಿ ತಳೆದರು.[೪]

ಭಿತ್ತಿರೂಹುಗಳು ಆಧುನಿಕವಾಗಿ ಬೇಡಿಕೆಯನ್ನು ಹೆಚ್ಚಿಸಿಕೊಂಡು ಜನಪ್ರಿಯವಾಗುತ್ತಿದ್ದಂತೆ ಸಾಮಾನ್ಯರು ಕೂಡಾ ತಮ್ಮ ಹೊಸ ಕಟ್ಟಡಗಳ ಅಂದ ಹೆಚ್ಚಿಸುವ ಒಂದು ಅಂಶವಾಗಿ ಆಲೋಚಿಸುವಂತಾಯಿತು. ಜನರು ತಮ್ಮ ಮನೆಗಳ ಅಂಗಳ ತೊಟ್ಟಿಯ ಮೇಲಿನ ಗೋಡೆಗಳಿಗಾಗಿ ಟೆರ್ರಾಕೋಟ ಕೃತಿಗಳನ್ನು ಮೂಡಿಸಿದರು.

೪. ಡಾ.ಎಂ.ಎಸ್.ಮೂರ್ತಿ : ಆಧುನಿಕ ಭಿತ್ತಿರೂಹುಗಳು (ಮ್ಯೂರಲ್), ಪುಟ-೨೭೧, ೭೮

## ಶಿಲ್ಪಕಲೆ

ಆಧುನಿಕ ಶಿಲ್ಪ ರಚನೆಯಲ್ಲಿ ವೈಯಕ್ತಿಕ ವಿಚಾರಗಳನ್ನು ಪ್ರತಿಪಾದಿಸುವುದು ಹಾಗೇ ರೂಪ ಆಕಾರ, ಚಲನಾನುಭವ ಬರೆದು ನಯ ಬೆಳಕು ನೆರಳಿನಾಟ ಭಾವನೆಗಳು ಹೀಗೆ ತಮಗೆ ತೃಪ್ತಿಯಾಗುವವರೆಗೂ ರಚಿಸಿ ಅದಕ್ಕೆ ತಕ್ಕ ವಾತಾವರಣ ನಿರ್ಮಿಸುವುದು. ಶಿಲ್ಪಗಳಲ್ಲಿಯೂ ಸಹ ಬಾಹ್ಯ ವಾಸ್ತವತೆಗಿಂತ ಆಂತರಿಕ ರೂಪದ ಅಭಿವ್ಯಕ್ತಿಗೆ ಮಹತ್ವ ನೀಡಲಾಗಿದೆ. ಶಿಲ್ಪ ಹೋಗಿರಬೇಕೆಂಬ ಕಟ್ಟುಪಾಡುಗಳಲ್ಲ ಇಡೀ ವಿಶ್ವದ ಸಂವೇದನಾ ಶೀಲತೆಯನ್ನು ವೈಜ್ಞಾನಿಕವಾಗಿ ತತ್ವಗಳ ಚಿಂತನೆಗಳನ್ನು ಇಂದಿನ ಪರಿಸ್ಥಿತಿ ಧೋರಣೆಗಳನ್ನು ಪ್ರತಿಪಾದಿಸುವುದೇ ಮುಖ್ಯವಾಗಿರುತ್ತದೆ.

ಪ್ರಪಂಚದಲ್ಲಿ ಶಿಲ್ಪ ಕಲೆಯ ಉಗಮ ಬಹಳ ಪ್ರಾಚೀನವೆಂದು ತಿಳಿಯಲಾಗಿದೆ. ಅಸ್ಪಷ್ಟ ಕೃತಿಯ ಮಾತೃದೇವತೆಯ ಶಿಲ್ಪವೊಂದು ವಿಯನ್ನಾದ ಸಂಗ್ರಹಾಲಯವೊಂದರಲ್ಲಿದ್ದು, ಅದರ ಕಾಲವನ್ನು ಕ್ರಿ.ಪೂ.ಸುಮಾರು ೧೫೦೦ ರಿಂದ ೧೦.೦೦೦ ಎಂದು ಭಾವಿಸಲಾಗಿದೆ. ಅದನ್ನು ಹೊರತುಪಡಿಸಿಯೇ ಕ್ರಿ.ಪೂ.೩೦೦೦ರ ವೇಳೆಗಾಗಲೇ ಶಿಲ್ಪಕಲೆಯ ಮಹತ್ವ ಪಡೆದಿದ್ದುದನ್ನು ಈಜಿಪ್ಟ್ ಮೆಸಪೋಟೋಮಿಯ ಇತ್ಯಾದಿ ಪ್ರಾಚೀನ ನಾಗರಿಕತೆಯ ನೆಲೆಗಳಲ್ಲಿ ದೊರೆತಿರುವ ಶಿಲ್ಪಗಳ ಮೂಲಕ ಸ್ಪಷ್ಟಪಡಿಸಿಕೊಳ್ಳಬಹುದಾಗಿದೆ.

ಭಾರತದಲ್ಲಿಯೂ ಕ್ರಿ.ಪೂ.೨೫೦೦ರ ಸುಮಾರಿಗೆ ಶಿಲ್ಪಕಲೆಯು ಬೆಳೆದು ಬಂದಿದ್ದುದನ್ನು ಹರಪ್ಪಾ ಮತ್ತು ಮಹೆಂಜೋದಾರುಗಳಲ್ಲಿ ದೊರೆಯುವ ಹಲವು ಮುದ್ರೆಗಳು ಮತ್ತು ಶಿಲ್ಪಗಳು ವಿಶೇಷವಾಗಿ ಮಾತೃದೇವತೆ ಗೊಂಬೆ ಕಂಚಿನ ನರ್ತಕಿಯರ ಶಿಲ್ಪಗಳು ಮನದಟ್ಟು ಮಾಡಿವೆ. ಅಂದಿನಿಂದ ಇಂದಿನವರೆಗೂ ನಿರಂತರವಾಗಿ ಶಿಲ್ಪಕಲೆಯ ಭಾರತದಲ್ಲಿ ಮಹತ್ತರ ಸಾಧನೆಯನ್ನು ಮಾಡುತ್ತಲೇ ಬಂದಿದ್ದಾರೆ. ದಕ್ಷಿಣ ಭಾರತ ಶಿಲ್ಪಕಲೆಯಲ್ಲಿ ವಿಶಿಷ್ಟ ಸಾಧನೆ ಮಾಡಿದೆ. ಕ್ರಿ.ಪೂ.೨ನೆಯ ಶತಮಾನದ ವೇಳೆಗೆ ದಕ್ಷಿಣ ಭಾರತದಲ್ಲಿ ಶಿಲ್ಪಕಲೆಯು ಬೌದ್ಧ ಸ್ತೂಪಗಳಲ್ಲಿ ಅರಳಿರುವುದನ್ನು ಆಂಧ್ರ ಪ್ರದೇಶದಲ್ಲಿ ಶಾತವಾಹನರು ವೆಂಗಿಯ ಚಾಲುಕ್ಯರು ಶಿಲ್ಪಕಲೆಗೆ ಪ್ರೋತ್ಸಾಹ ನೀಡಿದಂತೆಯೇ ಕರ್ನಾಟಕದಲ್ಲಿ ಬಾದಾಮಿ ಚಾಲುಕ್ಯರು, ಗಂಗರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು ಹೀಗೆ ಅನೇಕ ಮನೆತನಗಳು ಶಿಲ್ಪಕಲೆಯ ಬೆಳವಣಿಗೆಗೆ ಕಾರಣವಾಗಿದ್ದಾರೆ.[೫]

### ಶಿಲ್ಪಕಲೆ ಹುಟ್ಟು ಅದರ ಹಿನ್ನೆಲೆ

ಭಾರತದಲ್ಲಿ ಬ್ರಿಟಿಷ್ ಕಾಲೋನಿಯಲ್ ಕಲೆ ಬೆಳವಣಿಗೆಯ ಜೊತೆ ಯುರೋಪಿನಲ್ಲಾದ ಕ್ರಾಂತಿಕಾರಿ ಬೆಳವಣಿಗೆಗಳಿಂದ ನಮ್ಮ ಕಲೆಗೆ ಚಾಲನೆ ಸಿಕ್ಕಿತು. ಅದು ವಿಶ್ವದ ಎಲ್ಲಾಕಡೆಗಳಿಗೂ ವ್ಯಾಪಿಸಿದಾಗ ಭಾರತಕ್ಕೆ ಕೂಡಾ ಅದರ ಪ್ರಭಾವ ಬೀರಿತು. ಜನರೆಲ್ಲಾ ಸಾಮಾಜಿಕ, ರಾಜಕೀಯ ಬದಲಾವಣೆಗಳಿಂದ ಶಿಲ್ಪಕಲೆ ತನ್ನ ರೂಪ, ಆಕಾರ, ಶೈಲಿಗಳಿಂದ ಹೊಸತನವನ್ನು ಪಡೆಯಿತು. ಬ್ರಿಟಿಷರು ಭಾರತದಲ್ಲಿ ಪಾಶ್ಚಾತ್ಯ ಶೈಲಿಯಲ್ಲಿ

೫. ಎಚ್.ಎನ್.ಗೋಪಾಲರಾವ್ : ಶಿಲ್ಪಕಲಾ ಪ್ರಪಂಚ, ದಕ್ಷಿಣ ಭಾರತದ ಶಿಲ್ಪಗಳು, ಪುಟ-೧೯೯, ೧೩೦

ಕಲಾಭ್ಯಾಸವನ್ನು ನಮ್ಮ ಯುವಕರಿಗೆ ನೀಡುವ ಮೂಲಕ ಭಾರತದಲ್ಲಿ ಪಾಶ್ಚಾತ್ಯ ಶೈಲಿಯಲ್ಲಿ ಕಲಾಭ್ಯಾಸವನ್ನು ನಮ್ಮ ಯುವಕರಿಗೆ ನೀಡುವುದರ ಮೂಲಕ ಬ್ರಿಟಿಷರು ಭಾರತದಲ್ಲಿ ಕಾಲೋನಿಯಲ್ ಕಲೆ ಅಥವಾ ವಿಕ್ಟೋರಿಯನ್ ಕಲೆ, ವಾಸ್ತವ ಕಲೆಯನ್ನು ಭಾರತದಲ್ಲಿ ಬಿತ್ತಿದ್ದರು.[೬] ಅಲ್ಲದೆ ಬ್ರಿಟಿಷ್ ಶೈಲಿಯ ವಾಸ್ತು ನಿರ್ಮಾಣಗಳನ್ನು ಭಾರತದಲ್ಲಿ ನಿರ್ಮಿಸಿ ಅದರಲ್ಲಿ ಟೆರ್ರಾಕೋಟಾ (ಮಣ್ಣುಶಿಲ್ಪ), ಗಾರೆ ದಾರುಶಿಲ್ಪಗಳನ್ನು ಮಾಡುವುದರ ಮೂಲಕ ಹೊಸತನವನ್ನು ಎರವಲು ಪಡೆಯುವುದರ ಮೂಲಕ ಭಾರತದ ಯುವ ಕಲಾವಿದರ ಮೇಲೆ ಪಾಶ್ಚಾತ್ಯ ಪ್ರಭಾವಗಳು ಗಾಢವಾಗಿಬೀರಲಾಂಬಿಸಿದವು. ಇವರಿಂದ ದೈವದಿಂದ ಸಾಮಾನ್ಯರ ಜನಜೀವನ ಮಟ್ಟಕ್ಕೆ ಶಿಲ್ಪಕಲೆಯನ್ನು ತಂದು ಸಮಾಜದ ವಿಷಯಗಳನ್ನು ಶಿಲ್ಪದ ವಿಷಯವನ್ನಾಗಿ ಮಾಡಿರು. ಇದು ಸಮಕಾಲೀನ ಶಿಲ್ಪಸೃಷ್ಟಿಗೆ ನಾಂದಿಯಾಯಿತು.

**ಕರ್ನಾಟಕದಲ್ಲಿ ನವ್ಯ ಶಿಲ್ಪ ಹುಟ್ಟು ಬೆಳವಣಿಗೆ**

ಕರ್ನಾಟಕದ ನವ್ಯಕಲೆ ಭಾರತೀಯ ನವ್ಯಕಲೆಯ ನೆರಳಿನಲ್ಲಿಯೇ ಬೆಳೆದು ಸಮಕಾಲೀನ ಶಿಲ್ಪಗಳ ಸೃಷ್ಟಿಕ್ರಿಯೆಯಲ್ಲಿ ದೃಶ್ಯಮಾಧ್ಯಮಗಳ ವಿಶಿಷ್ಟತೆಯನ್ನು ಕೆಲವು ದಶಕಗಳಿಂದೀಚೆಗೆ ಗುರುತಿಸಲ್ಪಟ್ಟು, ಇಂದು ಆಧುನಿಕ ಸತ್ವಗಳನ್ನು ತುಂಬಿಕೊಂಡು ತಮ್ಮ ಅಭಿವ್ಯಕ್ತಿ ವ್ಯಕ್ತಪಡಿಸುತ್ತಿರುವ ಹಲವಾರು ಯುವ ಪ್ರತಿಭೆಗಳು ಕರ್ನಾಟಕ ಆಧುನಿಕ ಶಿಲ್ಪಕಲೆಗಳ ಹೊಸ ಆಯಾಮ ನೀಡಿ ಆಧುನಿಕತೆದೆಡೆಗೆ ದಾಪುಗಾಲು ಹಾಕಿಕೊಂಡು ನಡೆಯುತ್ತಿರುವುದನ್ನು ಕಾಣಬಹುದು.

ಭಾರತದಲ್ಲಿ ಕಲಾ ಪ್ರವಾಹದಲ್ಲಿ ಒಂದಾಗಿ ನಡೆದುಕೊಂಡು ಹೊಸ ಸಂದರ್ಭ ಹೊಸ ಸಂವೇದಗಳ ಸೃಷ್ಟಿ ಆರಂಭವಾಯಿತು. ಮೊದಮೊದಲು ಭಾವಶಿಲ್ಪಗಳು ಹೆಚ್ಚು ಪ್ರಚಲಿತದಲ್ಲಿದ್ದವು. ೧೮೯೧ರಲ್ಲಿ ಪುಣೆಯ ಗಣಪತಿರಾವ್ ಕಾಶೀನಾಥ ಇವರು ವಾಸ್ತವ ಶಿಲ್ಪಶೈಲಿಯ ಭಾವಶಿಲ್ಪ ಮಾಡುವುದರಲ್ಲಿ ಪ್ರಸಿದ್ಧಿ ಪಡೆದಿದ್ದರು. ೧೯೧೯ರಲ್ಲಿ ದಿವಾನ್ ಶೇಷಾದ್ರಿ ಅಯ್ಯರ್‌ರವರ ಕಂಚಿನಮೂರ್ತಿ ಮತ್ತು ಮೈಸೂರು ಮಹಾರಾಜರಾದ ಜಯಚಾಮರಾಜೇಂದ್ರ ಒಡೆಯರ ಹಾಗೂ ಕೃಷ್ಣರಾಜೇಂದ್ರ ಒಡೆಯರ ಪೂರ್ಣ ಪ್ರಮಾಣದ ಅಮೃತ ಶಿಲೆಯ ಭಾವಶಿಲ್ಪಗಳನ್ನು ಮೂಡಿಸುವ ಮೂಲಕ ಅದರ ಪ್ರಭಾವ ಮೈಸೂರಿನ ಶಿಲ್ಪಕಲಾವಿದರ ಮೇಲಾಯಿತು. ಕೆ.ವೆಂಕಟಪ್ಪನವರ ೧೮೮೭ರಲ್ಲಿ ಚಾಮರಾಜೇಂದ್ರ ತಾಂತ್ರಿಕ ಸಂಸ್ಥೆಯಲ್ಲಿ ರೂಪ ಶಿಲ್ಪ ಮಾಡುವುದನ್ನು ಅಭ್ಯಾಸ ಮಾಡಿದರು. ಮುಂದೆ ಮುಂಬೈನ ಶಿಲ್ಪಿಗಳಾದ ಹಾಗೂ ಇನ್ನಿತರ ಶಿಲ್ಪಕಲಾವಿದರ ಸ್ಟುಡಿಯೋದಲ್ಲಿ ಹೆಚ್ಚಿನ ಅನುಭವವನ್ನು ಪಡೆದು ಕಾಸ್ಟಿಂಗ್ ಮಾಡುವುದರಲ್ಲಿ ಪರಿಣಿತಿಯನ್ನು ಪಡೆದರು. ಅವರು ಮೈಸೂರಿನಲ್ಲಿ ನೆಲೆಸಿ ಬೆಂಗಳೂರಿನಲ್ಲಿ ವಿಶ್ವೇಶ್ವರಯ್ಯ ಹಾಗೂ ಕೆಂಪೇಗೌಡ ಕಂಚಿನ ಪ್ರತಿಮೆಗಳನ್ನು ಬೆಂಗಳೂರಿನ ಸಾರ್ವಜನಿಕ ಸ್ಥಳಗಳಲ್ಲಿ ಸ್ಥಾಪಿಸಲಾಗಿದೆ.[೭]

---

೬. ಪ್ರಮೀಳಾ ಲೋಚನ : ನವ್ಯ ಶಿಲ್ಪಕಲೆ, ಸಾಧನ ಸಂಚಿಕೆ, ೨೦೦೫, ೨೦೦೬, ಪುಟ-೬೨

೭. ಕರ್ನಾಟಕ ಕಲಾದರ್ಶನ : ಆಧುನಿಕ ಶಿಲ್ಪಕಲೆ, ವೆಂಕಟಚಲಪತಿಯವರ ಲೇಖನ, ಪುಟ-೨೫೪

ಆರ್.ಎಸ್.ನಾಯ್ಡು (೧೯೦೪-೮೫) ಅವರ ಸ್ವಯಂ ಸ್ಫೂರ್ತಿ ಕಲಾವಿದರು ಸ್ವಾತಂತ್ರ್ಯ ಹೋರಾಟಗಾರರು ಸೃಜನಶೀಲರು ಇವರು ನೈಜಶಿಲ್ಪಚಿತ್ರಗಳು ಮಾಡಿ ಹೆಸರು ಗಳಿಸಿದರು. ಕೊಡಗಿನ ಪೊನ್ನಪ್ಪ ರಾಜಿರಾಮ್ (೧೯೨೭-೧೯೬೧) ಶಾಲಾಕಾಲೇಜು ದಿನಗಳಲ್ಲಿಯೇ ಶಿಲ್ಪಕಲೆಯಲ್ಲಿ ಆಸಕ್ತಿವಹಿಸಿ ಶಿಕ್ಷಣ ಮುಗಿಸಿದ ನಂತರ ಪುಣೆಯ ಸೈನಿಕ ಶಾಲೆಯಲ್ಲಿ ವೃತ್ತಿಯಲ್ಲಿದ್ದರೂ ಯುರೋಪ ಹಾಗೂ ದೇಶದ ನಾನಾ ಭಾಗಗಳಲ್ಲಿಸಂಚರಿಸಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಶಿಲ್ಪದ ಬಗ್ಗೆ ಆಗುತ್ತಿರುವ ಬದಲಾವಣೆಗಳನ್ನು ಗಮನಿಸುತ್ತಾ ಶಿಲ್ಪದ ನೆಲೆಯನ್ನು ಕಂಡುಕೊಂಡರು. ನಂತರ ಮರದ ಮಾಧ್ಯಮದಲ್ಲಿ ನವ್ಯಶಿಲ್ಪಗಳು ಮಾನಾವಾಕೃತಿಗಳನ್ನು ಮಾಡಿ ತುಂಬಾ ಹೆಸರುಗಳಿಸಿದ ಇವರು ನವ್ಯಶಿಲ್ಪಕ್ಕೂ ಬಾಂಬೆ ಆರ್ಟ್ ಸೊಸೈಟಿಯ ಬಹುಮಾನಗಳಿಸಿದ್ದಾರೆ. ೧೯೫೪ರ ಸಮಯದಲ್ಲಿ ದೇವನಹಳ್ಳಿ ಹನುಮಂತಾಚಾರ್ಯ (೧೯೨೫-೧೯೮೯) ಇವರು ಸಂಪ್ರದಾಯ ಶಿಲ್ಪಗಳಲ್ಲದೆ ಟೆರ್ರಾಕೋಟಾ ಶಿಲ್ಪಗಳಲ್ಲಿ ಪಶ್ಚಿಮ ಪ್ರಭಾವ ಕೆಲವು ಶಿಲ್ಪಗಳನ್ನು ಕ್ಯೂಬಿಕ್ ಶೈಲಿಯಲ್ಲಿ ಮಾಡಿದ್ದೂ ನವ್ಯತೆಯನ್ನು ಸಂಪ್ರದಾಯದೊಂದಿಗೆ ಮೇಳೈಸಿದರು.

೧೯೨೦-೧೯೯೩ರಲ್ಲಿ ದೇವಲಕುಂದ ವಾದಿರಾಜರವರು ಸಾಂಪ್ರದಾಯ ಶಿಲ್ಪ ಕಲೆಗೆ ಹೆಚ್ಚು ಶಿಲ್ಪಶೈಲಿ ಹಾಗೂ ಮೂರಲ್ ಭಾವಶಿಲ್ಪಗಳನ್ನು ಫೈಬರ್ ಗ್ಲಾಸ್ಫ್ ಸಿಲಿಕಾನ್ ರಬ್ಬರ್‌ನಂತಹ ಹೊಸ ಮಾಧ್ಯಮಗಳಲ್ಲಿ ತಮ್ಮನ್ನು ಒಗ್ಗಿಸಿಕೊಂಡರು. ೧೯೩೪ರಲ್ಲಿ ಧನಂಜಯ ಶಿಲ್ಪಿಯವರು ವಿಕ್ಟೋರಿಯನ್ ಶೈಲಿಯಲ್ಲಿ ವಾಸ್ತವ ಶೈಲಿಯ ಭಾವಶಿಲ್ಪಗಳು, ಸಂಯೋಜನಾ ಶಿಲ್ಪಗಳು, ಪ್ಲಾಸ್ಟರ್ ಆಫ್ ಪ್ಯಾರೀಸ್, ಮೆಟಲ್, ಕಂಚು ಇತ್ಯಾದಿ ಮಾಧ್ಯಮಗಳಲ್ಲಿ ಪರಿಣಿತರಾಗಿದ್ದರು. ೧೯೩೫ರಲ್ಲಿ ನಾಗಲಿಂಗಚಾರ್ಯರು ಸಮಕಾಲೀನ ವಾಸ್ತವ ಶೈಲಿಗಳಲ್ಲಿ ಸಿದ್ಧಹಸ್ತರಿದ್ದು, ಇವರು ಉತ್ತಮ ಶಿಲ್ಪ ಶಿವಮೊಗ್ಗದ ಅಶ್ವಾರೂಢ ಶಿವಪ್ಪನಾಯ್ಕನು ಎಲ್ಲರ ಮೆಚ್ಚುಗೆಗೆ ಪಾತ್ರವಾಗಿದೆ. ೧೯೬೧ರಲ್ಲಿ ಕೃಷ್ಣಮೂರ್ತಿ ರಾಮ್‌ಕಿಂಕರ ಬೈಜ್ ಅವರ ನೇತೃತ್ವದಲ್ಲಿ ಶಿಲ್ಪ ಕಲಿತ ಇವರು ಮಲೆನಾಡಿನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಶಿಲ್ಪಗಳ ರಚನೆಯನ್ನು ಸಿಮೆಂಟ್ ಮಾಧ್ಯಮದಲ್ಲಿ ರಚಿಸಿದ್ದು, ಇವರ ಶೈಲಿ ಸ್ವಂತಿಯೊಳ್ಳದ್ದಾಗಿದೆ. ೧೯೭೯ರಲ್ಲಿ ಶ್ರೀ ವೆಂಕಟಾಚಲಪತಿಯವರು ದೇವನಹಳ್ಳಿಯ ಹನುಮಂತಾಚಾರ್ಯರಲ್ಲಿ ಮೊದಲಿನ ಶಿಲ್ಪಕಲೆ ಕಲಿತು ಹೊಸ ಹೊಸ ಮಾಧ್ಯಮಗಳ ಪರಿಚಯವಾಯಿತು. ಮಯರಲ್ ವೆಲ್ಡಿಂಗ್ ಶಿಲ್ಪಗಳು ಸೆರಾಮಿರ್ ಹೀಗೆ ಅನೇಕ ಮಾಧ್ಯಮಗಳಲ್ಲಿ ಶಿಲ್ಪಕಲಾಕೃತಿಗಳನ್ನು ರಚಿಸುತ್ತಿದ್ದರು.

೧೯೮೦ರಲ್ಲಿ ಕೆ.ಕೆ.ಹೆಬ್ಬಾರವರು ಅನೇಕ ಯುವ ಶಿಲ್ಪಗಳನ್ನು ಬರೋಡಾದ ಶಾಂತಿನಿಕೇತನಕ್ಕೆ ಕಳುಹಿಸಿ ಅಲ್ಲಿನ ಶಿಕ್ಷಣ ಪದ್ಧತಿಯಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಕಂಡು ನಮ್ಮ ಯುವ ಶಿಲ್ಪಗಳಿಗೆ ಚಿತ್ರಕಾರರಿಗೆ ನವ್ಯ ಶೈಲಿಯ ಪದ್ಧತಿಗಳಿಗೆ ಹೆಚ್ಚು ಒತ್ತು ಕರ್ನಾಟಕದಲ್ಲಿ ಸಿಕ್ಕಿದಂತಾಯಿತು.[೮]

---

೮. ಪ್ರಮೀಳ ಲೋಚನ : ನವ್ಯ ಶಿಲ್ಪಕಲೆ, ಸಾಧನ ಸಂಚಿಕೆ, ೨೦೦೫, ೨೦೦೬, ಪುಟ-೭೦, ೭೨

ಕರ್ನಾಟಕದಲ್ಲಿ ನವ್ಯ ಶಿಲ್ಪಕಲಾ ಪರಂಪರೆಯನ್ನು ಕುರಿತು ಹೆಚ್ಚು ಮಾನ್ಯತೆ ಕೊಟ್ಟವರಲ್ಲಿ ಪುಷ್ಪಮಾಲಾ ದೇಶಪಾಂಡೆ, ಶೀಲಾಗೌಡ, ಶ್ರೀವಸುಂದರ, ವೆಂಕಟಚಲಪತಿ ಹೀಗೆ ಒಂದು ಶಿಲ್ಪಕಲಾವಿದರ ಗುಂಪು ಒಂದು ಹೊಸ ಅನುಭವದ ಕೊಡುಗೆಗಳನ್ನು ಇಲ್ಲಿ ನೀಡಿದ್ದಾರೆ. ಪುಷ್ಪಮಾಲರವರು ಮಣ್ಣಿನ ಮಾಧ್ಯಮದಲ್ಲಿ ಮಾಡಿಕೊಂಡು ಅನೇಕ ಶೈಲಿಯಲ್ಲಿ ಅವರ ಕಲಾಕೃತಿಗಳನ್ನು ನಡೆಸಿಕೊಂಡು ಬಂದಿದ್ದಾರೆ. ಇವರಲ್ಲದೆ ಕಳೆದ ದಶಕಗಳಲ್ಲಿ ಬೆಂಗಳೂರಿನಲ್ಲಿ ನೆಲೆಸಿರುವ ನಾರಾಯಣ ಸೂತ್ರದಾರ್, ಭವಾನಿ ಕುಲಕರ್ಣಿ ವಿಜಯರಾವ್, ನಟರಾಜ್ ಶರ್ಮ, ಬಾಬು ಈಶ್ವರಪ್ರಸಾದ್, ಶಿವಾನಂದ ಬಂಟನೂರು, ನಾಗಪ್ಪ ಪ್ರಧಾನಿ, ವೀರಣ್ಣ ಆರ್ಕಸಾಲಿ ಇನ್ನೂ ಅನೇಕರು ನವ್ಯ ಮಾಧ್ಯಮ ಮತ್ತು ಶೈಲಿಗಳಲ್ಲಿ ತಮ್ಮದೇ ಆದ ಕೊಡುಗೆಯನ್ನು ಕರ್ನಾಟಕಕ್ಕೆ ನೀಡಿದ್ದಾರೆ.

೧೯೯೦ರ ನಂತರದಲ್ಲಿ ಅನೇಕ ಯುವ ಪ್ರತಿಭೆಗಳು ನವ್ಯಶಿಲ್ಪಕಲೆ ಮಾಡುವುದರಲ್ಲಿ ನಿಪುಣರಾಗಿದ್ದಾರೆ. ಹಲವಾರು ಯುವ ಕಲಾವಿದರು ಬರೋಡಾ ಶಾಂತಿನಿಕೇತನ, ಭೂಪಾಲ್ ದೆಹಲಿ ಹೀಗೆ ಅನೇಕ ಕಲಾಶಾಲೆಗಳಲ್ಲಿ ಕಲಿತು ನವೀನ ಯುಗದಲ್ಲಿ ಅನೇಕ ಸಿದ್ಧಾಂತಗಳನ್ನು ಶಿಲ್ಪ, ಚಿತ್ರ, ಸಂಕೇತ ಹಾಗೂ ಕಬ್ಬಿಣದ ತುಂಡುಗಳಿಂದ ವೆಲ್ಡಿಂಗ್ ಮಾಡಿ ಜೋಡಣ ಶಿಲ್ಪ ಹೀಗೆ ಶಿಲ್ಪಕ್ಕೆ ಸಾಂಪ್ರದಾಯಿಕ ಮಾಧ್ಯಮಗಳಾದ ಕಲ್ಲು, ಕಂಚು, ಮರ ಇಂತಹ ಮಾಧ್ಯಮಗಳನ್ನು ತೊರೆದು ತಮ್ಮ ಕೈಗೆ ಸಿಕ್ಕ ಯಾವುದೇ ವಿವಿಧ ಬಗೆಯ ವಸ್ತುಗಳಿಂದ ತಮ್ಮ ಅಭಿವ್ಯಕ್ತಿಯನ್ನು ಇಂದಿನ ಕರ್ನಾಟಕದ ಶಿಲ್ಪಕಲಾವಿದರು ಇನ್ಸ್ಟಾಲೇಷನ್ ಕಲೆ ಭೂಕಲೆ ಸ್ಥಳ ನಿರ್ದಿಷ್ಟ ಹೀಗೆ ಆಧುನಿಕ ಯುಗದಲ್ಲಿ ಕಲೆ ನಾನಾ ಇಸಂಗಳನ್ನು ದೇಶಿಯತೆ ತನ್ನತನಗಳಿಂದ ಪ್ರತಿಸೃಷ್ಟಿಸುತ್ತಿರುವ ಇಂದಿನ ಯುವ ಶಿಲ್ಪಿಗಳು ಅವರಿಗೆ ಎಟಕುವ ಮಾಧ್ಯಮಗಳಲ್ಲಿ ರೂಪಿಸಿ ತಮ್ಮದೇ ಆದ ವಿಶಿಷ್ಟ ಶೈಲಿಗಳಲ್ಲಿ ಶಿಲ್ಪಗಳನ್ನು ರಚಿಸುತ್ತಿದ್ದಾರೆ.

ಇಂದು ಆಧುನಿಕ ಶಿಲ್ಪಕಲಾವಿದರು ರಾಷ್ಟ್ರದ ಮತ್ತು ರಾಜ್ಯದ ಸಮಕಾಲೀನ ಶಿಲ್ಪಕಲಾರಂಗದಲ್ಲಿ ಇವರಿಗೆ ವಿಶೇಷವಾದ ಸ್ಥಾನದೊರಕಿದೆ. ಈಗಿನ ಶಿಲ್ಪಕಲಾವಿದರುಗಳು ರಚಿಸಿದ ಶಿಲ್ಪಗಳು ಮತ್ತು ಚಿತ್ರಕಲಾವಿದರುಗಳ ಪ್ರದರ್ಶನಗಳ ವಿಶ್ವದ ಬೇರೆ ಬೇರೆ ದೇಶಗಳಲ್ಲಿ ನಡೆಯುತ್ತಿದೆ. ಅನೇಕ ಕಲಾವಿದರು ರಚಿಸಿದಂತಹ ಕಲಾಕೃತಿಗಳು ಅನೇಕ ವಸ್ತುಸಂಗ್ರಹಾಯಗಳಲ್ಲಿ ಸೇರ್ಪಡೆಗೊಂಡಿವೆ. ಶಿಲ್ಪಕಲೆ ಚಿತ್ರಕಲೆಯಲ್ಲಿ ಹೊಸ ಹೊಸ ಅನುಭವ ಚಿಂತನೆಗಳು ಬೆಳೆಯತೊಡಗಿವೆ. ರಾಜ್ಯದಲ್ಲಿ ಇತ್ತೀಚೆಗೆ ಅನೇಕ ಕಲಾವಿದರು ಕಲೆಯಲ್ಲಿ ಸೃಜನಶೀಲತೆಯನ್ನು ಮೆರೆದಿದ್ದಾರೆ. ಇಂದಿನ ಕಲಾವಿದರ ಅಭಿವ್ಯಕ್ತಿ ಮಾಧ್ಯಮ ಅವರ ಸೃಜನಾತ್ಮಕ ಯೋಜನೆ ಸಮಕಾಲೀನ ದೃಷ್ಟಿಯಲ್ಲಿ ಅತಿ ಮಹತ್ವವಾದ ಸ್ಥಾನವನ್ನು ಪಡೆದುಕೊಳ್ಳುವಲ್ಲಿ ವಿಫಲವಾಗಿದೆ.

ಶಿಲ್ಪಗಳ ರಚನೆಯಲ್ಲಿ ಈಗಿನ ಕಲಾವಿದರು ವಾಸ್ತವ ಸೃಷ್ಟಿಗಿಂತ ಆಂತರಿಕ ರೂಪ ಅಭಿವ್ಯಕ್ತಿಗೆ ಹೆಚ್ಚಿನ ಮಹತ್ವವನ್ನು ನೀಡುತ್ತಿದ್ದಾರೆ. ಇಂದಿನ ಕಲಾವಿದರು ಒಂದು ಶಿಲ್ಪವು ಹೇಗೆ ಇರಬೇಕು. ಹೇಗೆ ರಚನೆ

ಮಾಡಬೇಕು. ಎಂಬ ಅಂಶಗಳು ಕಂಡುಬಂದಿರುವುದಿಲ್ಲ. ನಮ್ಮ ವಿಜ್ಞಾನ ಕ್ಷೇತ್ರದಲ್ಲಿ ಪ್ರಗತಿಯನ್ನು ಹೊಂದಿದ ಕಾರಣದಿಂದ ಅನೇಕ ತತ್ವಗಳನ್ನು ಇಂದಿನ ನವ್ಯಕಲೆಯಲ್ಲಿ ಪ್ರತಿಪಾದಿಸುವ ಹೊಂದಿಸಿಕೊಳ್ಳುವ ಸಾಧ್ಯತೆಗಳನ್ನು ನಾವು ವಿಶ್ವಾದ್ಯಂತ ಕಾಣಬಹುದಾಗಿದೆ.[೯]

೨೦ನೆಯ ಶತಮಾನದಲ್ಲೂ ಸಹ ಇನ್ನೂ ಸಹ ಶಿಲ್ಪ ಮತ್ತು ಚಿತ್ರಗಳಲ್ಲಿ ಅನೇಕ ರೀತಿಯ ಪ್ರಯೋಗಗಳು ನಡೆಯುತ್ತಲೇ ಬಂದಿರುವುದನ್ನು ಕಾಣಬಹುದು. ಇಲ್ಲಿ ಶಿಲ್ಪಿ ಮತ್ತು ಚಿತ್ರಕಲಾವಿದರ ತಂತ್ರಶೈಲಿ ರಚನಾವಿಧಾನವನ್ನು ಗಮನಿಸುತ್ತಿದ್ದರೆ, ಇಲ್ಲಿ ನವ್ಯತೆಗೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿದ್ದಾರೆ. ಅದು ಏಕೆಂದರೆ ನಮ್ಮ ಸಮಾಜ ಅತಿ ವೇಗಾಗಿ ಬೆಳೆಯುತ್ತಿರುವುದರಿಂದ ಸಮಾಜಕ್ಕೆ ನೋಡಿರುವುದನ್ನೇ ನೋಡಿ ನೋಡಿ ಇಂತಹ ಹೊಸದಾಗಿರುವಂತಹ ಸೃಜನಾತ್ಮಕ ಶಿಲ್ಪವಾಗಲಿ ಚಿತ್ರವಾಗಲಿ ಕಂಡರೆ ಅದರ ಕಡೆಗೆ ಹೆಚ್ಚಿನ ಗಮನ ಹರಿಸುವಂತಾಗಿದೆ. ಆಕಾರ ಹಳ್ಳಿಗಾಡಿನ ಪ್ರದೇಶಗಳಲ್ಲಿ ಇದಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ.

ಈ ಮೇಲೆ ಹೇಳಿದಂತೆ ಭಿತ್ತಿಚಿತ್ರ/ಶಿಲ್ಪಕಲೆಯ ನೆಲೆ ಹಿನ್ನೆಲೆ ಕಾಲಕಾಲಕ್ಕೆ ಆದಂತಹ ಬದಲಾವಣೆಗಳನ್ನು ನಾವು ಕಂಡುಕೊಳ್ಳಬಹುದು. ನಂತರ ಆಧುನಿಕ ಯುಗದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಲಾಕೃತಿಯಲ್ಲಿ ಹೊಸತನವನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಭಿತ್ತಿಚಿತ್ರ/ಶಿಲ್ಪಕಲೆಯನ್ನು ಈ ಕೆಳಗಿನಂತೆ ವರ್ಗೀಕರಣ ಮಾಡಲಾಗಿದೆ.

೧. ಭಿತ್ತಿಮಾಧ್ಯಮ ವರ್ಣಚಿತ್ರ
೨. ಗಾಜಿನ ಮಾಧ್ಯಮದ ಭಿತ್ತಿಚಿತ್ರ
೩. ಮಣ್ಣು/ಸಿಮೆಂಟ್ ಮಾಧ್ಯಮದ ಭಿತ್ತಿಶಿಲ್ಪ
೪. ಫೈಬರ್/ಮರ ಮಾಧ್ಯಮದ ಭಿತ್ತಿಶಿಲ್ಪ.
೫. ಸಂಕೀರ್ಣ ಮಾಧ್ಯಮದ ಭಿತ್ತಿಚಿತ್ರ/ಶಿಲ್ಪ

ಈ ರೀತಿಯಾಗಿ ವರ್ಗೀಕರಣ ಮಾಡಿಕೊಂಡು ಇವುಗಳ ಬಗ್ಗೆ ಮುಂದಿನ ಅಧ್ಯಾಯಗಳಲ್ಲಿ ಅಭ್ಯಸಿಸಲು ಪ್ರಯತ್ನಿಸಲಾಗಿದೆ.

* * *

೯. ಪ್ರಮೀಳ ಲೋಚನ : ನವ್ಯ ಶಿಲ್ಪಕಲೆ, ಸಾಧನ ಸಂಚಿಕೆ, ೨೦೦೫, ೨೦೦೬, ಪುಟ-೭೪

ಅಧ್ಯಾಯ - ಮೂರು

# ಭಿತ್ತಿ ಮಾಧ್ಯಮದ ವರ್ಣಚಿತ್ರ

ಭಿತ್ತಿ ಚಿತ್ರವನ್ನು ಆಂಗ್ಲಭಾಷೆಯಲ್ಲಿ Mural painting ಎಂದು ಕರೆಯುತ್ತಾರೆ. ಈ Mural ಶಬ್ದವು ಲ್ಯಾಟಿನ್ ಭಾಷೆಯ Murul ದಿಂದ ಬಂದಿದೆ. Muus ದ ಅರ್ಥ ಗೋಡೆ (wall) ಎಂದಾಗುವುದು ಗೋಡೆಯಮೇಲೆ ಬಣ್ಣದಿಂದ ಬರೆದ ಚಿತ್ರ ಮತ್ತು ಕೆತ್ತಿ ಕೊರೆದು ಅಂಟಿಸಿ ರೂಪಿಸುವ ಚಿತ್ರಗಳು ವ್ಯಾಪ್ತಿಯಲ್ಲಿ ಬರುತ್ತವೆ. ಎಂದು ಕ್ಯಾಂಬ್ರಿಜ್ ವಿಶ್ವಕೋಶ ತಿಳಿಸುತ್ತದೆ. ಗೋಡೆ ಮತ್ತು ಮೇಲ್ಛಾವಣಿಗಳನ್ನು ವರ್ಣಚಿತ್ರಗಳಿಂದ ಅಲಂಕರಿಸುವ ವಿಧಾನವನ್ನು ಭಿತ್ತಿ ಚಿತ್ರಕಲೆ ಎಂದು ಆಕ್ಸ್‌ಫೊರ್ಡ್ ಶಬ್ದಕೋಶದಲ್ಲಿ ಹೇಳಲಾಗಿದೆ. ಗೋಡೆಗಳು ಮೇಲ್ಛಾವಣಿಗಳು ಎನ್‌ಕ್ಯಾಸ್ಟಿಕ್ ವಿಧಾನಗಳಿಂದ ಚಿತ್ರರಚಿಸಿ ಅಲಂಕರಿಸುವ ವಿಧಾನವನ್ನು ಸಹ ಭಿತ್ತಿಚಿತ್ರಕಲೆ ಎಂದು ವೆಬ್‌ಸ್ಟಿರ್ಸ್ ನ್ಯೂ ವರ್ಲ್ಡ್ ಸೈಕ್ಲೋಪಿಡಿಯಾ ಪರಿಗಣಿಸಿದೆ. ಗೋಡ್ಯೆ ಮತ್ತು ಮೇಲ್ಛಾವಣಿಗಳ ಮೇಲೆ ವರ್ಣದಿಂದ ರಚಿಸಿದ ಚಿತ್ರಗಳು ಮತ್ತು ಬಣ್ಣದ ಕಲ್ಲಿನ ತುಂಡುಗಳನ್ನು ಸೊಡುಬಿಲ್ಲೆ ಅಂಟಿಸಿ ರೂಪಿಸಿದ ಮೊಸಾಯಿಕ್ ಚಿತ್ರಗಳು (Mural Painting) ಭಿತ್ತಿಚಿತ್ರಗಳ ವ್ಯಾಪ್ತಿಯಲ್ಲಿ ಒಳಗೊಳ್ಳುತ್ತದೆ ಎಂದು ಬ್ರಿಟಾನಿಕಾ ಎನ್‌ಸೈಕ್ಲೋಪಿಡಿಯಾ ಹೇಳುತ್ತದೆ. ಕನ್ನಡ ಜನಪದ ಕೋಶವು ಭಿತ್ತಿಚಿತ್ರ ಎಂದರೆ ಗೋಡೆಯ ಮೇಲೆ ಬರೆದಿರುವ ಚಿತ್ರವೆಂದು ಹೇಳಿ, ಭಿತ್ತಿ ಎಂಬುವುದಕ್ಕೆ ಗೋಡೆ ಕುಡ್ಯಂ, ಮೂಲ ತಳ ಹಿನ್ನೆಲೆ ಚಿತ್ರವನ್ನು ಬರೆಯುವ ಮೂಲಾಧಾರಗಳಾದ ಬಟ್ಟೆ, ಗೋಡೆ ಮೊದಲಾದ ಸಾಧನಗಳು ಎಂಬ ಅರ್ಥಗಳನ್ನು ಕೊಟ್ಟಿದೆ. ಭಾರತೀಯ ಪ್ರಾಚೀನ ಶಿಲ್ಪ ಶಾಸ್ತ್ರಗಳು ಚಿತ್ರ ಬರೆಯಲಾಗುವ ಮೂಲಾಧಾರವಾದ ಗೋಡೆ ಮತ್ತು ಚಿತ್ರಣಕ್ಕಾಗಿ ಆಧಾರದ ಮೇಲೆ ಲೇಪಿಸಲಾಗುವ ಗಾರೆ ಲೇಪನ ಎರಡಕ್ಕೂ ಭಿತ್ತಿ ಎಂದೇ ಕರೆದಿವೆ. ಗೋಡೆಯ ಮೇಲೆ ಲೇಪಿಸಲಾಗುವ ಗಾರೆಲೇಪನವನ್ನು ಭಿತ್ತಿ ಎಂದು ಪರಿಗಣಿಸಿದಾಗ ಗಾರೆ ಲೇಪನದ ಮೇಲೆ ರಚನೆಗೊಂಡ ಚಿತ್ರಗಳನ್ನು ಭಿತ್ತಿಚಿತ್ರ ಎಂದು ಹೇಳಬೇಕಾಗುವುದು.[೧] ಕೆಲವು ಸಾಹಿತ್ಯ ಕೃತಿಗಳಲ್ಲಿಯೂ ಭಿತ್ತಿ ಚಿತ್ರಗಳ ಬಗ್ಗೆ ಪ್ರಾಸಂಗಿಕ ವಿವರಗಳಿರುವುದನ್ನು ಇಲ್ಲಿ ಕಾಣಬಹುದು.

೧. ಡಾ.ಎಸ್.ಸಿ.ಪಾಟೀಲ : ಕರ್ನಾಟಕದ ಜನಪದ ಚಿತ್ರಕಲೆ, ಪುಟ-೩೬

"ಭಿತ್ತಿ ಇಲ್ಲದೆ ಬರೆಯಬಹುದೇ ಚಿತ್ತಾರವ

ಭಿತ್ತಿಯೊಂದಿಲ್ಲದಿದ್ದರೆ ಚಿತ್ರವೆಂತಿರಬಹುದು

ಚಿತ್ರವಿಲ್ಲದೇ ಭಿತ್ತಿ ಸೊಗಸಹುದೆಂತು"

ದಿನೇಶ್ವರಸುತನ ರೂಪವು ಚಿತ್ರಂ ಬರೆದಂತಿರ್ಪುದು ಚಿತ್ರ ಭಿತ್ತಿಯೊಳೆನ್ನಾ ಎಂಬಂತಹ ಸಾಲುಗಳು ಭಿತ್ತಿ ಮತ್ತು ಭಿತ್ತಿ ಚಿತ್ರದ ಬಗೆಗೆ ತಿಳಿಸುತ್ತದೆ. ಇವುಗಳ ಒಟ್ಟಾರೆ ಅರ್ಥ ಭಿತ್ತಿ ಎಂದರೆ ಚಿತ್ರವನ್ನುಬರೆಯುವ ಮೂಲಾಧಾರ ಎಂದು ಪರಿಗಣಿಸಬಹುದು. ಭಿತ್ತಿ ಚಿತ್ರವೆಂದರೆ ಗೋಡೆಯ ಮೇಲೆ ಬರೆದ ಚಿತ್ರವೆಂದು ಸಾಮಾನ್ಯವಾದ ತಿಳುವಳಿಕೆಯಿದ್ದರೂ ಮೇಲಿನ ಸಾಲುಗಳಲ್ಲಿನ ವಿವರಣೆಯಿಂದ ಭಿತ್ತಿಚಿತ್ರವೆಂದರೆ ಬರೀ ಗೋಡೆಯ ಮೇಲೆ ರಚಿಸಿದ ಚಿತ್ರಗಳೆಲ್ಲ ಭಿತ್ತಿಚಿತ್ರಗಳೆನಿಸುತ್ತಿವೆ. ಭಿತ್ತಿ ಇಲ್ಲದೇ ಬರೆಯಬಹುದೇ ಚಿತ್ತಾರವ ಭಿತ್ತಿಯೊಂದಿಲ್ಲದಿದ್ದರೆ ಚಿತ್ರವೆಂತಿರಬಹುದು ಎನ್ನುವಲ್ಲಿ ಚಿತ್ರಬರೆಯುವ ಭಿತ್ತಿಯ ಅವಶ್ಯಕತೆಯನ್ನು ತಿಳಿಸಿಕೊಡುತ್ತದೆ.[೨]

ಭಿತ್ತಿಚಿತ್ರಗಳ ಪರಂಪರೆ ಭಾರತದಲ್ಲಿರುವಂತೆ ಕರ್ನಾಟಕದಲ್ಲಿ ಅನೇಕ ಕಡೆ ಪಸರಿಸಿದ್ದು ಕಂಡು ಬರುತ್ತದೆ. ಭಾರತದಲ್ಲಿ ಈ ವಿಧಾನವು ಕ್ರಿ.ಪೂ.ಒಂದನೆಯ ಶತಮಾನದಿಂದಲೂ ಬಳಕೆಯಲ್ಲಿತ್ತು. ಎಂಬುವುದಕ್ಕೆ ಅಜಂತ, ಎಲ್ಲೋರ, ನಾಸಿಕ್, ಬಾಗ್ ಸಿಗೀಯ ಮುಂತಾದ ಕಡೆಗಳಲ್ಲಿರುವ ಭಿತ್ತಿಚಿತ್ರಗಳು ಪ್ರತ್ಯಕ್ಷ ಉದಾಹರಣೆಗಳಾಗಿವೆ. ಗೋಡೆಯ ಮೇಲೆ ಸುಣ್ಣವನ್ನು ಲೇಪಿಸಿ ಸುಣ್ಣವು ಇನ್ನು ಸಹಿ ಇರುವಾಗಲೇ ಚಿತ್ರವು ಪೂರ್ಣವಾಗಿ ಚಿತ್ರಿತವಾಗುವಂತೆ ಚಿತ್ರಿಸುವುದು ಫ್ರೆಸ್ಕೋ ಪದ್ಧತಿಯ ವೈಶಿಷ್ಟ್ಯವಾಗಿವೆ. ಸುಣ್ಣವು ಒಣಗಿದ ನಂತರ ಅದರೊಂದಿಗೆ ಚಿತ್ರವು ಗಟ್ಟಿಗೊಂಡು ಶಾಶ್ವತವಾಗಿ ಉಳಿಯುತ್ತದೆ. ಪುರಾತನ ಕಾಲದಲ್ಲಿ ಗೋಡೆಗಳ ಮೇಲೆ ಚಿತ್ರಿಸಲ್ಪಟ್ಟ ಅನೇಕ ಫ್ರೆಸ್ಕೋ ಚಿತ್ರಗಳು ಉತ್ಕೃಷ್ಟ ಕಲಾಕೃತಿಗಳಾಗಿವೆ. ಗೋಡೆಗಳಿಗೆ ಬಣ್ಣವನ್ನು ಹಚ್ಚುವ ವಿಧಾನಗಳು ಸಹ ಬಳಸುವದೆಂಬುವುದಕ್ಕೆ ವೆನಿಸ್ ಮತ್ತಿತರ ಕಡೆಗಳಲ್ಲಿ ಕ್ಯಾನವಾಸನ ಮೇಲೆ ಚಿತ್ರಿಸಿದ ನಂತರ ಗೋಡೆ ಇಲ್ಲವೆ ಬಾಳ ಮಾಳಿಗೆಯಲ್ಲಿ ಅಂಟಿಸಿರುವುದು ಕಂಡು ಬರುತ್ತದೆ. ಸುಣ್ಣವು ಹಸಿ ಯಾಗಿರುವಾಗಲೇ ಚಿತ್ರಣ ಕಾರ್ಯವು ಮುಗಿಯಲೇ ಬೇಕಾಗಿರುವುದರಿಂದ ಈ ಪದ್ಧತಿಯು ಸಹ ಬಹು ಕಠಿಣವಾಗಿದೆ. ಚಿತ್ರಣ ಕಾರ್ಯವು ಸಾಧ್ಯವಾಗುವ ಮಟ್ಟಿಗೆ ಗೋಡೆಯಭಾಗದ ಮೇಲೆ ಸುಣ್ಣವನ್ನು ಲೇಪಿಸಿ ಅದರ ಮೇಲೆ ವರ್ಣ ಚಿತ್ರಗಳನ್ನು ರಚಿಸಬೇಕಾಗುತ್ತದೆಯಲ್ಲದೆ, ಸುಣ್ಣದ ತೀವ್ರವು ಹಸಿಯಾಗಿರುವುದು ಅವಶ್ಯಕವಾಗಿರುತ್ತದೆ. ಇಲ್ಲಿ ಒಂದು ಬಾರಿ ಬಣ್ಣವನ್ನು ಹಚ್ಚಿದ ಬಳಿಕ ನಂತರ ತಿದ್ದುಪಡಿಮಾಡಲು ಸಾಧ್ಯವಾಗಲಾರದು. ಅಲ್ಲದೇ ಬಣ್ಣವು ಒಣಗಿದ ಬಳಿಕ ಬಣ್ಣದ ರೂಪ ಬದಲಾವಣೆಗೊಳ್ಳುವುದರಿಂದ ಸರಿಯಾದ ಬಣ್ಣವನ್ನು ತಯಾರಿಸಿಕೊಳ್ಳುವುದರಲ್ಲಿ ಕಲಾವಿದನಿಗೆ ವಿಧಿ ವಿಧಾನಗಳು ತಿಳಿದಿರಬೇಕಾಗಿರುತ್ತದೆ.

ಶ್ರೀರಂಗಪಟ್ಟಣದಲ್ಲಿ ಪೂರ್ತಿಯಾಗಿ ಯುದ್ಧಕ್ಕೆ ಸಂಬಂಧಿಸಿದ ಚಿತ್ರಗಳು ಮೂಡಿ ಬಂದರೆ ನಿಪ್ಪಾಣಿ ವಾಡೆಯಲ್ಲಿ ಶ್ರೀಕೃಷ್ಣ ಕಥನಕ್ಕೆ ಸಂಬಂಧಿಸಿದ ಕೃತಿಗಳು ದೊರೆತಿವೆ. ಮೈಸೂರಿನ ಕೆಲವೆಡೆ ಕೃಷ್ಣನ ಬಾಲ್ಯವನ್ನು

---

೨. ಯಾದಪ್ಪ ಬಿ.ಪರದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆಯ ಒಂದು ಅಧ್ಯಯನ, ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ, ಕ.ವಿ.ವಿ., ಹಂಪಿ, ಪುಟ-೨೬

ಬಿಂಬಿಸುವ ಚಿತ್ರಗಳು, ಬಕಾಸುರನವದೆ, ವರಹಾ ಸ್ವಾಮಿಯು ದೇವಾಲಯದಲ್ಲಿರುವ ವಸ್ತ್ರಾಭರಣ ಕೃಷ್ಣಸ್ವಾಮಿ ದೇವಾಲಯದ ಪೌರಾಣಿಕ ಯುದ್ಧವನ್ನು ಬಿಂಬಿಸುವ ಚಿತ್ರ ದರ್ಬಾರಿನಲ್ಲಿ ಮೈಸೂರು ಒಡೆಯರು ಜಗನ್ಮೋಹನ ಚಿತ್ರಶಾಲೆಯ ಮೈಸೂರು ಅರಮನೆಯ ಚಿತ್ರ ಇದಲ್ಲದೆ ಯುದ್ಧದ ಸನ್ನಿವೇಶಗಳು ಬೇಟೆಯ ಚಿತ್ರಗಳಲ್ಲಿ ಅಪಾರವಾಗಿ ಕಾಣುತ್ತವೆ. ಅದೇ ರೀತಿಯಾಗಿ ಹಂಪಿಯ ಗಿರಿರಾಜ ಕಲ್ಯಾಣ ಕೂಡಾ ಪ್ರಖ್ಯಾತ ಭಿತ್ತಿಚಿತ್ರವಾಗಿದೆ.

ಹೀಗೆ ರಾಜ್ಯದ ಅನೇಕ ಸ್ಥಳಗಳಲ್ಲಿ ಸಾಂದರ್ಭಿಕವಾಗಿ ಭಿತ್ತಿ ಚಿತ್ರಗಳು ರಚಿತಗೊಂಡಿವೆ. ಕರ್ನಾಟಕದ ದಖ್ಖನಿ ಶೈಲಿಯಲ್ಲಿ ರಚಿತಗೊಂಡ ವಿಶೇಷಚಿತ್ರಗಳು ಒಂದೆಡೆಯಾದರೆ ಬೀದರ ಮತ್ತು ಗುಲ್ಬರ್ಗಾದಲ್ಲಿ ರಚಿತವಾದ ನಕ್ಷಾ ಚಿತ್ರಗಳನ್ನುಹೊಂದಿರುವ ಅಲಂಕಾರದ ಭಿತ್ತಿ ಪರಂಪರೆಯಲ್ಲಿ ವಿಶೇಷ ಸ್ಥಾನವನ್ನು ಪಡೆದಿದೆ. ಅಲ್ಲದೇ ಹಿಂದೂ ಧರ್ಮಕ್ಕೆ ಸಂಬಂಧಿಸಿದ ಚಿತ್ರಗಳು ಗುಲ್ಬರ್ಗಾದಲ್ಲಿ ಕಂಡು ಬಂದಿವೆ.

ಸುರಪುರ ರಂಗಂಪೇಟೆಯಲ್ಲಿರುವ ದತ್ತಾತ್ರೇಯ ಚಿತ್ರಗಳು ರಾಯಚೂರು ವಾಡೆಯಲ್ಲಿರುವ ನೃತ್ಯಗಾರ್ತಿ ವಸ್ತ್ರಾಪಹರಣ, ಬೀದಿರಿನ ರಂಗೀನ ಮಹಲ್ ಹೀಗೆ ಅನೇಕ ಕಡೆಗಳಲ್ಲಿ ಕೂಡ ಚಿತ್ರ ಪರಂಪರೆಯನ್ನು ಕಾಣಬಹುದು.

### ಆಧುನಿಕ ಭಿತ್ತಿಚಿತ್ರಗಳು

ಪ್ರಾಚೀನ ಪರಂಪರೆಯ ಚಿತ್ರಗಳ ಉದ್ದೇಶ ಶೈಲಿ ಒಂದು ಕಡೆಯಾದರೆ ಇತ್ತೀಚಿನ ಆಧುನಿಕ ಶೈಲಿಯ ಭಿತ್ತಿ ಪರಂಪರೆ ವಿಭಿನ್ನ ರೀತಿಯಾಗಿದೆ. ಮೊದಲು ಚಿತ್ರಗಳು ದೇವಾಲಯ, ಅರಮನೆ ಇನ್ನಿತರ ಪ್ರಮುಖ ಸ್ಥಳಗಳಷ್ಟೆ ನಾವು ಕಾಣಬಹುದು. ಆದರೆ ಬರುಬರುತ್ತಾ ಅವು ಸಾರ್ವಜನಿಕಗೊಂಡು ಒಂದು ಕಟ್ಟಡದ ಸಂಕೇತ ಸೂಚಕವಾಗಿ ಚಿತ್ರವನ್ನು ಬಳಸಲು ಪ್ರಾರಂಭಿಸಿದರು. ಹೀಗೆ ಕ್ರೀಡಾಂಗಣ, ವಿಜ್ಞಾನ ಭವನ, ವಸ್ತುಸಂಗ್ರಹಾಲಯ, ಖಾದಿಭಂಡಾರ, ರೈಲು ನಿಲ್ದಾಣ, ಉದ್ಯಾನವನ, ಹೋಟೆಲ್, ಹೀಗೆ ಅನೇಕ ಸ್ಥಳಗಳಲ್ಲಿ ಅವುಗಳ ಅಸ್ಥಿತ್ವವನ್ನು ಹೇಳುವಂತೆ ಹಾಗೂ ಪೂರಕವಾಗಿರುವಂತಹ ಭಿತ್ತಿಚಿತ್ರಗಳು ಪ್ರಾರಂಭವಾಗಿ ತೀರ ಇತ್ತೀಚೆಗೆ ತಮ್ಮ ಮನೆಗಳಲ್ಲಿ ಆಸ್ಪತ್ರೆಗಳಲ್ಲಿ ಕಲ್ಯಾಣಮಂಟಪ್ಪಗಳಲ್ಲಿಯು ಸಹ ಭಿತ್ತಿಚಿತ್ರಗಳನ್ನು ರಚಿಸಲು ಆಸಕ್ತಿ ವಹಿಸುತ್ತಿದ್ದಾರೆ. ಈ ರೀತಿಯ ಚಿತ್ರಗಳನ್ನು ಹೆಚ್ಚಾಗಿ ಬಳಸುತ್ತಿರುವುದು ಬೆಂಗಳೂರು ಹಾಗೂ ಗುಲ್ಬರ್ಗಾದಲ್ಲಿ ಕಾಣಬಹುದಾಗಿದೆ.

ಬೆಂಗಳೂರಿನಲ್ಲಿ ಅನೇಕ ಕಲಾವಿದರು ಆಧುನಿಕ ಭಿತ್ತಿಚಿತ್ರಗಳನ್ನು ರಚಿಸುತ್ತಿರುವುದನ್ನು ಕಾಣುತ್ತೇವೆ. ಇದರಲ್ಲಿ ಮುಖ್ಯವಾಗಿ ಗುಲ್ಬರ್ಗಾದ ಕಲಾ ಚಟುವಟಿಕೆಗಳನ್ನು ಹೊಂದಿರುವ ಪ್ರದೇಶವಾಗಿರುವುದರಿಂದ ಕಲಾಕ್ಷೇತ್ರಕ್ಕೆ ಸಂಬಂಧಿಸಿದ ಅನೇಕ ಹೊಸ ಹೊಸ ಆಯಾಮಗಳು ಇಲ್ಲಿ ಮೈಗೂಸಿಕೊಂಡಿರುವುದು ಸಹಜ ಅದರಲ್ಲಿ ಈ ಭಿತ್ತಿ ಚಿತ್ರಗಳಲ್ಲಿಯ ಅಭಿರುಚಿಯನ್ನು ಹೊಂದಿರುವುದು ಹಾಗೂ ಸ್ಥಳೀಯರಿಗೆ ಅದರ ಆಸಕ್ತಿಯನ್ನು ಹೆಚ್ಚಿಸುವಲ್ಲಿ ಕಲಾವಿದರಾದ ಪ್ರೊ.ವಿ.ಜಿ.ಅಂದಾನಿಯವರ ಪಾತ್ರ ಹಾಗೂ ಅವರ ಶಿಷ್ಯ ವೃಂದದ ಪಾತ್ರವನ್ನು ಭಿತ್ತಿಚಿತ್ರಕಲಾ ಮಾಧ್ಯಮಕ್ಕೆ ಕೊಡುಗೆಯಾಗಿ ನೀಡಿದ್ದಾರೆ.



ನಾಡಿನ ಸಂಸ್ಕೃತಿ




ಕಾರ್ಟೋನ್ ಸಂಯೋಜನೆ



ಮರ ಮತ್ತು ಪಕ್ಷಿಗಳು

### ನಾಡಿನ ಸಂಸ್ಕೃತಿ

ಈ ಭಿತ್ತಿಚಿತ್ರವನ್ನು ಪಿಟರ್ ಲೂಯಿಸ್ ಎಂಬುವವರು ರಚಿಸಿದ್ದು, ಬೆಂಗಳೂರಿನ ಲಲಿತಕಲಾ ಅಕಾಡೆಮಿಯ ಮುಂದಿನ ಭಿತ್ತಿಯಲ್ಲಿ ರಚಿಸಿದ್ದು, ಇದು ೧೫x೨೦ ಅಡಿ ಅಳತೆಯನ್ನು ಹೊಂದಿದೆ. ಇದನ್ನು ಟೆಂಪರ್ ಮಾಧ್ಯಮದಿಂದ ರಚಿಸಿದ್ದಾರೆ.

ಈ ಭಿತ್ತಿಚಿತ್ರದಲ್ಲಿ ಮುಖ್ಯವಾಗಿ ಮಧ್ಯಭಾಗದಲ್ಲಿ ಆನೆಯನ್ನು ಕಾಣುತ್ತೇವೆ.ಇಲ್ಲಿ ಆನೆಯ,ಮುಖವನ್ನು ಹಳದಿ ಬಣ್ಣದಿಂದ ರಚಿಸಿದ್ದು, ಅದರ ಮೈ ಬಣ್ಣವನ್ನು ಕಪ್ಪಾಗಿ ರಚಿಸಿದ್ದಾರೆ. ಅದರ ಮೈಯ ಮೇಲೆ ವಿವಿಧ ಆಕಾರದಿಂದ ರಚಿಸಿದ ಬಟ್ಟೆಯನ್ನು ಹಾಕಿದ್ದಾರೆ. ಅದರ ಹಿಂಬದಿಯಲ್ಲಿ ಹಿಂದೂ ಮುಸ್ಲಿಂ ಕ್ರೈಸ್ತ ಧರ್ಮದ ದೇವಾಲಯಗಳನ್ನು ಕಾಣಬಹುದು. ಅದರ ಹಿಂಬದಿಯಲ್ಲಿ ಕೀಲು ಕುದುರೆಗಳು ಅದರ ಪಕ್ಕದಲ್ಲಿ ಸೂರ್ಯ, ಕೆಳಭಾಗದಲ್ಲಿ ಚಾಮರವನ್ನು ಹಿಡಿದಿರುವ ಮನುಷ್ಯ ಮತ್ತು ಯಕ್ಷಗಾನಕ್ಕೆ ಸಂಬಂಧಿಸಿದಂತೆ ವೇಶಭೂಷಣಗಳು ಯುವಕ ಯುವತಿ ತಂಬೂರಿಯನ್ನು ಹಿಡಿಯವರು ಡೊಳ್ಳು ಬಾರಿಸುತ್ತಿರುವುದು ನೇಗಿಲು ಹೊಡೆಯುತ್ತಿರುವುದು ಮೂರ್ತಿಯಲ್ಲಿ ಕೋಳಿ ಹುಂಜಗಳು ಜಗಳವಾಡುತ್ತಿರುವುದನ್ನು ಈ ಚಿತ್ರದಲ್ಲಿ ಸಂಯೋಜನೆಯನ್ನು ಉತ್ತಮವಾಗಿ ಮಾಡಿದ್ದು ಹಳದಿ, ಹಸಿರು, ಕೆಂಪು ವರ್ಣಗಳಿಂದ ರಚಿಸಿರುವುದನ್ನು ಕಾಣುತ್ತೇವೆ.

### ಕಾರ್ಟೂನ್ ಸಂಯೋಜನೆ

ಈ ಚಿತ್ರವನ್ನು ಎಸ್.ಜಿ.ವಾಸುದೇವ ಅವರು ಬೆಂಗಳೂರಿನ ಸಂತೋಷ ಚಿತ್ರಮಂದಿರದ ಭಿತ್ತಿಯ ಮೇಲೆ ರಚಿಸಿದ್ದು, ಇದನ್ನು ಬಣ್ಣದಿಂದ ರಚಿಸಿಲಾಗಿದೆ.

ಈ ಚಿತ್ರದಲ್ಲಿ ಬಲದಿಂದ ಒಬ್ಬ ನಿಂತಿರುವ ವ್ಯಕ್ತಿಯನ್ನು ಚಿತ್ರಿಸಿದ್ದು, ಅವನಿಗೆ ಹಣೆಯ ಮೇಲ್ಭಾಗವನ್ನು ಎಡಭಾಗಕ್ಕೆ ಇದು ಅವನ ಮೀಸೆಯನ್ನು ದಪ್ಪವಾಗಿ ರಚಿಸಿದ್ದಾರೆ. ತನ್ನ ಕೊರಳಿಗೆ ಡೊಳ್ಳನ್ನು ಹಾಕಿಕೊಂಡು ಹೊಡೆಯುತ್ತಿರುವುದನ್ನು ನೋಡುತ್ತೇವೆ. ಅದರ ಪಕ್ಕದಲ್ಲಿ ಒಬ್ಬ ಚಿಕ್ಕ ಹುಡುಗ ಆಟ ಹಾಡುತ್ತಿರುವುದನ್ನು ಕಾಣಬಹುದು. ಇದರ ಎಡಭಾಗದಲ್ಲಿ ಒಬ್ಬ ವ್ಯಕ್ತಿಯು ಚಾಮರವನ್ನು ಹಿಡಿದುಕೊಂಡು ನಿಂತಿದ್ದಾನೆ. ಆನೆಯ ಮೇಲೆ ಕುಳಿತು ಸವಾರಿ ಮಾಡುತ್ತಿರುವುದನ್ನು ನೋಡುತ್ತೇವೆ. ಒಂದು ಪಕ್ಷಿಯು ಹಾರುತ್ತಾ ಬರುತ್ತಿದೆ. ಅವರ ಹಿಂದೆ ಒಂದು ಹಾವು ಬರುತ್ತದೆ. ಅದರ ಎಡಭಾಗದಲ್ಲಿ ಆನೆಗಳು ರಚಿತವಾಗಿದ್ದು ಅದರ ಮೇಲೆ ಒಬ್ಬ ವ್ಯಕ್ತಿಯು ಕುಳಿತಿದ್ದಾನೆ. ಒಟ್ಟಾರೆಯಾಗಿ ಈ ಚಿತ್ರದಲ್ಲಿ ಮಿಶ್ರವರ್ಣಗಳನ್ನು ಕಾಣಬಹುದಾಗಿದೆ. ಇಲ್ಲಿ ಕಲಾವಿದರು ಸಂಯೋಜನೆಯನ್ನು ಸುಂದರವಾಗಿ ಮಾಡಿದ್ದಾರೆ.

### ಮರ ಮತ್ತು ಪಕ್ಷಿಗಳು

ಈ ಚಿತ್ರವನ್ನು ಪಂಪಾಪತಿಯವರು ರಚಿಸಿದ್ದು ಬೆಂಗಳೂರಿನ ಒಂದು ಮನೆಯ ಭಿತ್ತಿಯ ಮೇಲೆ ೮x೩೦ ಅಡಿ ಅಳತೆಯನ್ನು ಹೊಂದಿದೆ, ೨೦೦೯ರಲ್ಲಿ ರಚನೆ ಮಾಡಲಾಗಿದೆ.

ಭಿತ್ತಿಚಿತ್ರದಲ್ಲಿ ಒಂದು ಸುಂದರವಾದ ಮರವನ್ನು ಹಳದಿ ಬಣ್ಣದಿಂದ ರಚಿಸಿದ್ದು, ರೆಂಬೆ ಕೊಂಬೆಗಳನ್ನು ವಿನ್ಯಾಸಭರಿತದಲ್ಲಿ ರಚಿಸಿದ್ದು, ಅದರ ಮೇಲೆ ಕುಳಿತಿರುವ, ಹಾರುವ, ಹಾರುಬರುತ್ತಿರುವ ಪಕ್ಷಿಯನ್ನು ಕಾಣಬಹುದು. ಒಂದು ಪಕ್ಷಿಯನ್ನು ಕಪ್ಪು ಬಣ್ಣದಿಂದ ರಚಿಸಿದರೆ ಮತ್ತೊಂದು ಪಕ್ಷಿಯನ್ನು ಬಿಳಿಯ ಬಣ್ಣದಿಂದ ರಚಿಸಿದ ಹಾರಿಬರುತ್ತಿರುವ ಪಕ್ಷಿ ಕಪ್ಪು ಮತ್ತು ಬಿಳಿಯ ಬಣ್ಣದಿಂದ ಕೂಡಿದೆ. ಅನೇಕ ಚಿಟ್ಟೆಗಳು ಹಾರುತ್ತಿರುವುದನ್ನು ರಚಿಸಿದ್ದು. ಕೆಂಪು, ಬಿಳಿ, ಹಳದಿ ಮುಂತಾದ ಬಣ್ಣಗಳಿಂದ ಕೂಡಿದ್ದಾಗಿದೆ. ಹಿಂಭಾಗದಲ್ಲಿ ಹಳದಿ, ಕೆಂಪು, ನೀಲಿ ಅನೇಕ ಬಣ್ಣಗಳನ್ನು ಮಿಶ್ರಿತ ಮೊರೆ ಕಲಾಕೃತಿಯ ರಚಿಸಲಾಗಿದೆ. ಇಲ್ಲಿ ಕಲಾವಿದನ ಭಾವನೆ ಹೊಸತನವಾಗಿದ್ದು ಮರದಲ್ಲಿ ಎಲೆಗಳಿಲ್ಲವಾದರೂ ಸಹ ಆ ಸಂಯೋಜನೆಯನ್ನು ಅತ್ಯುತ್ತಮವಾಗಿ ರಚಿಸಿದ್ದಾರೆ.

**ಸೂರ್ಯಾಸ್ತ**

ಭಿತ್ತಿಚಿತ್ರವನ್ನು ಕಾಶೀನಾಥರವರು ರಚಿಸಿದ್ದು, ಮುರ್ಡೇಶ್ವರದಲ್ಲಿ ಕಾಣಬಹುದು. ಈ ಭಿತ್ತಿಯನ್ನು ೨೦೦೨ರಲ್ಲಿರಚಿಸಿದ್ದು, ೧೫x೨೦ ಅಡಿ ಅಳತೆಯನ್ನು ಹೊಂದಿದೆ.

ಈ ಭಿತ್ತಿಚಿತ್ರದಲ್ಲಿ ಕಲಾವಿದನು ಸೂರ್ಯವಾಗಿರುವುದನ್ನು ರಚಿಸಿರುವುದು ಕಂಡುಬರುತ್ತದೆ. ಇಲ್ಲಿ ಸಮುದ್ರದ ಅಲೆಗಳನ್ನು ನೀಲಿ ಬಣ್ಣದಿಂದ ರಚಿಸಿದ್ದು, ಅಲೆಗಳು ರಭಸದಿಂದ ಬರುತ್ತಿರುವುದನ್ನು ಕಾಣಬಹುದು. ಸೂರ್ಯಸ್ತವಾಗುತ್ತಿರುವ, ಅದರ ಬೆಳಕು ನೀರಿನ ಮೇಲೆ ಅದರ ಛಾಯೆಯನ್ನು ಹಳದಿ ಬಣ್ಣದಿಂದ ರಚಿಸಿದ್ದಾರೆ. ಸೂರ್ಯನನ್ನು ಕೆಂಪು ಮತ್ತು ಹಳದಿ ಬಣ್ಣದಿಂದ ರಚಿಸಿ ಮೋಡಗಳನ್ನು ಕೇಸರಿ, ಬೂದು, ಹಳದಿ, ನೀಲಿ ಬಣ್ಣಗಳಿಂದ ಕೂಡಿದ್ದು ಆಕಾಶವನ್ನು ನೀಲಿ ಮತ್ತು ಕಪ್ಪುಬಣ್ಣದಿಂದ ರಚಿಸಿದ್ದಾರೆ. ಈ ರೀತಿಯ ಭಿತ್ತಿಯನ್ನು ಶಿಲ್ಪಕ್ಕೆ ಪೂರಕವಾಗಿ ರಚಿಸಿದ್ದಾರೆ.

**ಭಾರತೀಯ ಸಂಸ್ಕೃತಿ**

ಭಿತ್ತಿಚಿತ್ರವನ್ನು ಪ್ರೊ.ವಿ.ಜಿ.ಅಂದಾನಿಯವರು ರಚಿಸಿದ್ದು, ಗುಲ್ಬರ್ಗಾದ ಮಿನಿ ವಿಧಾನ ಸೌಧದಲ್ಲಿ ೧೬x೨೬ ಅಡಿ ಅಳತೆ ಹೊಂದಿದ್ದು, ಆಕ್ರಾಲಿಕ್ ಎಮ್ಲೋಷನ್ ಬಣ್ಣದಿಂದ ರಚಿಸಿದ್ದಾರೆ.

ಈ ಭಿತ್ತಿಯಲ್ಲಿ ಮುಖ್ಯವಾಗಿ ಭಾರತೀಯ ಸಂಸ್ಕೃತಿಯ ಇತಿಹಾಸ ತ್ಯಾಗ, ಶಿಕ್ಷಣವನ್ನು ಬಿಂಬಸುತ್ತದೆ. ಬಿಸಿಲು ಹಾಗೂ ಬರುಡನ್ನು ಬಿಂಬಿಸುತ್ತದೆ. ಉಯ್ಯಾಲೆ ಆಡುತ್ತಿರುವ ಮಹಿಳೆಯ ಮುಖವನ್ನು ಹಳದಿಬಣ್ಣದಿಂದ ರಚಿಸಿದ್ದು, ವಸ್ತ್ರಗಳನ್ನು ಕೆಂಪು, ಬಣ್ಣದಿಂದ ರಚಿಸಿದ್ದಾರೆ. ಬೌದ್ಧಧರ್ಮದ ಸಂಕೇತವಾಗಿರುವುದರಿಂದ ಸ್ತೂಪಗಳು ಮತ್ತು ಅಲ್ಲಿಯೇ ಹಸನ್ಮುಕಿಯಾಗಿರುವ ಗೌತಮ ಬುದ್ಧ, ಮಹಾವೀರ ಶಿವಶರಣ ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ ಇವರಲ್ಲದೆ ಈ ಭಾಗದ ಮಹಾನ್ ವಾಸ್ತುಶಿಲ್ಪಗಳು ಮತ್ತು ಪ್ರಸಿದ್ಧಿ ಯಾತ್ರಾಸ್ಥಳಗಳಾದ ಶರಣಬಸವೇಶ್ವರ ಮಂದಿರ, ಬಂದೇ ನವಾಜ ದರ್ಗಾ,

ಕೋಟೆ ಕಮಾನುಗಳು ಇವಲ್ಲದೇ ದಿನನಿತ್ಯದ ಬದುಕಿನ ದುಡಿಮೆಗಾಗಿ ಉಪಯೋಗಿಸುವಂತಹ ಕುದುರೆ ಟಾಂಗ, ಪ್ರಕೃತಿ ಇಲ್ಲಿನ ಹಲವಾರು ಸಂಕೇತಗಳನ್ನು ತೋರಿಸಿದ್ದಾರೆ. ಗೂಳಿ ಕೃತಿಯನ್ನು ಕಾಣಬಹುದು. ಭಾರತೀಯ ಮಹಾನ್‌ನಾಯಕರಾದ ಡಾ.ಬಿ.ಆರ್.ಅಂಬೇಡ್ಕರ್, ನೆಹರು, ಇಂದಿರಾಗಾಂಧಿ ಮಹಾತ್ಮ ಗಾಂಧಿಜೀಯವರ ಭಾವಚಿತ್ರಗಳು ಇಲ್ಲಿ ಕಾಣಬಹುದು. ಮೇಲ್ಭಾಗದಲ್ಲಿಅಜಂತಾ ಚಿತ್ರಗಳ ಅಲ್ಲಲ್ಲಿ ಚಲಿಸುತ್ತಿವೆ ಎಂಬ ಕಲ್ಪನೆಯನ್ನು ನೀಡುವಂತೆ ಹಾರುತ್ತಿರುವ ಬಿಳಿಯ ಪಾರಿವಾಳಗಳು ಸ್ವತಂತ್ರವನ್ನು ತೋರಿಸುತ್ತವೆ. ವಿಶ್ವವಿದ್ಯಾಲಯ ಕಾಲೇಜು ವಿದ್ಯಾರ್ಥಿಗಳು ಇವೆಲ್ಲ ಈ ಭಾಗದ ಸಮಗ್ರ ಚಿಂತನೆಯನ್ನು ಪ್ರತಿ ಬಿಂಬಿಸುತ್ತವೆ. ಈ ಚಿತ್ರದಲ್ಲಿ ಕೆಂಪು ಬಣ್ಣವನ್ನು ಹೆಚ್ಚಾಗಿ ರಚಿಸಿದ್ದು ಹಳದಿ, ಕಪ್ಪು, ಹಸಿರು ಬಣ್ಣಗಳಿಂದ ರಚಿಸಿದ್ದಾರೆ.

ಮಧುಬನಿ

ಭಿತ್ತಿಚಿತ್ರವನ್ನು ಶಿವ ಎಸ್.ಪಾಸವಾನ ರವರು ರಚಿಸಿದ್ದು, ೧೫x೧೦ ಅಳೆತೆಯನ್ನು ಹೊಂದಿದ್ದು. ದಿ.ಐಡಿಯಲ್ ಫೈನ್ ಆರ್ಟ್ ಕಟ್ಟಡದ ಭಿತ್ತಿಯ ಮೇಲಿದೆ.

ಈ ಭಿತ್ತಿಚಿತ್ರವನ್ನು ಜನಪದ ಶೈಲಿಯಲ್ಲಿ ರಚನೆಮಾಡಿದ್ದು. ಮರವನ್ನು ರಚಿಸಿ ಅದರ ಮೇಲೆ ಹುಲಿ, ನವಿಲುಗಳು ಬೇರೆ ಬೇರೆ ಪಕ್ಷಿಗಳು ಮರ ಕುಟುಕ, ಚಿಟ್ಟೆ ಎಲ್ಲಿ ಅಳಿಲು, ಗಿಳಿ, ಹಾರುತ್ತಿರುವ ಪಕ್ಷಿಯನ್ನು ರಚಿಸಿದ್ದು, ಹಳದಿ ಮತ್ತು ಹಸಿರುಬಣ್ಣದಿಂದ ಕೂಡಿದ ಎಲೆಗಳನ್ನು ಕಾಣಬಹುದು. ಕೊಂಬೆಯನ್ನು ಬಿಳಿ, ಕಪ್ಪು, ಕೆಂಪು, ಹಳದಿ ಬಣ್ಣಗಳಿಂದ ರಚಿಸಿದ್ದು, ಜನಪದ ಶೈಲಿಯಲ್ಲಿ ರಚಿತವಾದ ಕೋಲಾಟವಾಡುತ್ತಿರುವ ಸ್ತ್ರೀ ಮತ್ತು ಪುರುಷನ್ನು ಕಾಣಬಹುದು. ಪುರುಷನು ತಲೆಯ ಮೇಲೆ ಪೇಟಾವನ್ನು ಸುತ್ತಿದ್ದು, ಮೈ ಬಣ್ಣವನ್ನು ಹಳದಿ ಬಣ್ಣದಿಂದ ರಚಿತವಾಗಿದೆ. ಸ್ತ್ರೀಯ ಬಣ್ಣವನ್ನು ಬೂದು ಬಣ್ಣದಿಂದ ರಚಿಸಿದರೆ ಭಿತ್ತಿಚಿತ್ರದ ಎಡಭಾಗದಲ್ಲಿ ಬಿಳಿ ಸ್ತ್ರೀಯ ವಿವಿಧ ಬಣ್ಣದ ಆಕಾರಗಳಿಂದ ರಚಿತಾದ ಉಡುಪನ್ನು ಧರಿಸಿದ್ದಾರೆ. ತನ್ನ ಕೈಯಲ್ಲಿ ಹಣ್ಣು ಹಂಪಲುಗಳ ಬುಟ್ಟಿಯನ್ನು ಹಿಡಿದು ನಿಂತಿದ್ದಾಳೆ. ಇಲ್ಲಿ ಚಿತ್ರ ಸುಂದರವಾಗಿ ಕಾಣಿಸುತ್ತದೆ.

ನಿಸರ್ಗ ಸಂಸ್ಕೃತಿ

ಈ ಭಿತ್ತಿಚಿತ್ರವನ್ನು ಪ್ರೊ.ವಿ.ಜಿ.ಅಂದಾನಿಯವರು ಐಡಿಯಲ್ ಫೈನ್ ಆರ್ಟ್ ಕಾಲೇಜಿನ ಭಿತ್ತಿಯ ಮೇಲೆ ರಚಿಸಿದ್ದು ೧೫x೧೦ ಅಡಿ ಅಳತೆಯಿಂದ ಕೂಡಿದೆ.

ಭಿತ್ತಿಚಿತ್ರದಲ್ಲಿ ನಿಸರ್ಗ ಸಂಸ್ಕೃತಿಯನ್ನು ಕಾಣಬಹುದು. ಇಲ್ಲಿ ಒಬ್ಬ ಸ್ತ್ರೀಯನ್ನು ರಚಿಸಿ ತನ್ನ ಎರಡು ಕೈಗಳಿಗೆ ಸಣ್ಣ ಸಣ್ಣ ರೆಂಬೆಗಳನ್ನು ರಚನೆ ಮಾಡಿದ್ದು, ಅದರಲ್ಲಿ ಹೂವನ್ನು ಸಹ ಕಾಣಬಹುದು. ತಲೆಯ ಎರಡು ಕಡೆ ಪಕ್ಷಿಗಳು ಹಿಂದಿನ ಭಾಗದಲ್ಲಿ ನೀರಿನ ಅಲೆಗಳನ್ನು ರಚಿಸಿದ್ದು ಅದರಲ್ಲಿ ಕಪ್ಪು, ಹಸಿರು, ಹಳದಿ ಬಣ್ಣದಿಂದ ಕೂಡಿದಂತಹ ಮೀನುಗಳನ್ನು ಕಾಣಬಹುದು. ಅದರ ಹಿಂದೆ ಹಳದಿ ಬಣ್ಣದಿಂದ ಆಕಾಶ



ಮಧುಬನಿ



ನಿಸರ್ಗ ಮತ್ತು ಸಂಸ್ಕೃತಿ

ಬಣ್ಣವನ್ನು ರಚಿಸಿದ್ದಾರೆ. ಅದರ ಕೆಳಭಾಗದಲ್ಲಿ ಸ್ತ್ರೀಯ ಮುಖಕ್ಕೆ ಪಕ್ಷಿಯ ದೇಹವನ್ನು ರಚಿಸಿದ್ದು ಅದರ ತಳಭಾಗದಲ್ಲಿ ಜನಪದ ಕೋಲಾಟಕ್ಕೆ ಸಂಬಂಧಿಸಿದಂತೆ ರೇಖೆಗಳ ಮುಖಾಂತರ ವಿವಿಧ ಬಂಗಿಯಲ್ಲಿ ನಿಂತು ತಮಟೆ, ಡೊಳ್ಳು, ಪೀಪಿ, ನೃತ್ಯವನ್ನು ಮಾಡುತ್ತಿದ್ದಾರೆ. ಅದರ ಮೇಲ್ಭಾಗದಲ್ಲಿ ಚಿಟ್ಟೆ, ಇಲಿಗಳನ್ನು ರಚಿಸಿದ್ದು, ಒಂದು ದೊಡ್ಡ ಬೆಕ್ಕಿನ ಕೊರಳಿಗೆ ಗಂಟೆಯನ್ನು ಕಟ್ಟಿರುವುದದನ್ನು ಕಾಣುತ್ತೇವೆ. ಅದರ ಹಿಂದೆ ಗಣಪತಿಯು ತಲೆಗೆ ಪೇಟಾ ಸುತ್ತಿಕೊಂಡಿದ್ದು ಚಿತ್ರಿಸಿದ್ದಾರೆ. ಅದರ ಕೆಳಭಾಗದಲ್ಲಿ ತಲೆ, ಕಾಲುಗಳಿಲ್ಲದ ದೇಹವನ್ನು ರಚನೆ ಮಾಡಿದ್ದಾರೆ. ಈ ಭಿತ್ತಿಚಿತ್ರದಲ್ಲಿ ಹಳದಿ ಬಣ್ಣದ ಲೇಪನ ಹೆಚ್ಚಾಗಿ ಮತ್ತು ಹೊರ ರೇಖೆಗಳು ಹೆಚ್ಚಾಗಿ ಕಂಡುಬರುತ್ತವೆ.

## ಪ್ರಕೃತಿ ಚಿತ್ರ

ಭಿತ್ತಿಚಿತ್ರವನ್ನು ಐಡಿಯ ಫೈನ್ ಆರ್ಟ್‌ನ ವಿದ್ಯಾರ್ಥಿಗಳು ಆ ಕಟ್ಟಡದ ಹಿಂಭಾಗದಲ್ಲಿ ೨೦೦೬ರಲ್ಲಿ ರಚಿಸಿದ್ದು ೪೫x೮ ಅಡಿ ಅಳತೆಯನ್ನು ಹೊಂದಿದೆ.

ಭಿತ್ತಿಚಿತ್ರದಲ್ಲಿ ಪ್ರಕೃತಿ ಚಿತ್ರವನ್ನು ಕಾಣಬಹುದು, ಚಿತ್ರದ ಎಡಭಾಗದಿಂದ ಹಳದಿ ಬಣ್ಣದಿಂದ ಕೂಡಿದಂತಹ ಮನೆ ಅರಮನೆಯ ಮುಂದೆ ರಚಿಸಿದಂತಹ ಮರವು ಕಂದು ಮತ್ತು ಹಸಿರು ಬಣ್ಣವನ್ನು ಹೊಂದಿದ್ದು, ಮೇಲಿನ ಮಹಡಿಯಲ್ಲಿ ಮನೆಯು ಸುಂದರವಾಗಿ ಕಾಣಲು ಗಿಡಗಳನ್ನು ಹಚ್ಚಿದ್ದು, ಎರಡನೆ ಚಿತ್ರದಲ್ಲಿ ಬರಗಾಲಕ್ಕೆ ಸಂಬಂಧಿಸಿದರೆ, ಇಲ್ಲಿ ಮನೆಯ ಮೆಟ್ಟಿಲುಗಳನ್ನು ಕಾಣಬಹುದು. ಇದು ಸಾಧನೆಯ ಸಂಕೇತವಾಗಿದೆ. ಇಲ್ಲಿ ಹಸಿರು, ನೇರಳೆ, ಕೇಸರಿ, ಕೆಂಪು, ನೀಲಿ, ಬಣ್ಣಗಳಿಂದ ನಿರ್ಮಿಸಿದ್ದಾಗಿದೆ. ಬುಡ ಮತ್ತು ರೆಂಬೆಗಳನ್ನು ಮಾತ್ರ ಇಲ್ಲಿ ರಚಿಸಿದ್ದು, ಕಂದುಬಣ್ಣದಿಂದ ಕೂಡಿದೆ. ಮೇಲೆ ಕಿಟಕಿಯ ಬಣ್ಣವನ್ನು ಹಸಿರು ಬಣ್ಣದಿಂದ ಲೇಪಿಸಿದರೆ ಅದರ ಹಿನ್ನೆಲೆಗೆ ಕೆಂಪುವರ್ಣವನ್ನು ಲೇಪಿಸಿದ್ದಾರೆ. ಅದರ ಎಡಭಾಗದಲ್ಲಿ ಚೆಸ್ ಬೋರ್ಡಿನ ಹಾಗೆ ಕಪ್ಪು ಬಿಳಿಪು ಚೌಕಟ್ಟನ್ನು ಹಾಕಿ ಅದರ ಮೇಲೆ ಎರಡು ಒಣಮರಗಳನ್ನು ರಚಿಸಿರುವುದನ್ನು ಕಾಣುತ್ತೇವೆ. ಮೂರನೇ ಭಾಗದಲ್ಲಿ ಅನೇಕ ಕಟ್ಟಡಗಳಿಂದ ಕೂಡಿದ್ದು ವಿವಿಧ ಬಣ್ಣಗಳನ್ನು ಕಾಣುತ್ತೇವೆ. ಅದರ ಮುಂದೆ ಮರವನ್ನು ರಚಿಸಿದ್ದು ಕಂದು, ಬಣ್ಣದಿಂದ ರೆಂಬೆಗಳನ್ನು ರಚಿಸಿದರೆ ಹಸಿರು ಮತ್ತು ಹಳದಿ ಬಣ್ಣದಿಂದ ಮರವನ್ನು ರಚಿಸಿದ್ದಾರೆ. ಈಗಾಗಿ ಈ ಸಂಯೋಜನೆಗಳು ಸುಂದರವಾಗಿ ಕಾಣಿಸುತ್ತವೆ.

## ಶ್ರೀಕೃಷ್ಣ ಜಾನಪದ ಶೈಲಿ

ಭಿತ್ತಿ ಚಿತ್ರವನ್ನು ವೀರೇಂದ್ರ ಷಾ ರವರು ರಚಿಸಿದ್ದು, ಇದು ೧೦x೧೦ ಅಡಿ ಅಳತೆಯನ್ನು ಹೊಂದಿದ್ದು, ಗುಲ್ಬರ್ಗಾದ ಒಂದು ಕಟ್ಟಡದ ಮೇಲೆ ರಚನೆಗೊಂಡಿದೆ. ಇದನ್ನು ೨೦೦೮ರಲ್ಲಿ ರಚಿಸಿದ್ದಾರೆ.

ಈ ಭಿತ್ತಿಚಿತ್ರವನ್ನು ಜನಪದ ಶೈಲಿಯಲ್ಲಿ ರಚಿಸಿದ್ದು ಕೃಷ್ಣ ಮತ್ತು ಪರಿಸರಕ್ಕೆ ಸಂಬಂಧಿಸಿದಂತೆ. ರಚಿಸಿದ್ದು, ಇಲ್ಲಿ ಎಲ್ಲಾಚಿತ್ರರಚನೆಯು ಹೊರರೇಖೆಗಳಿಂದ ರಚಿಸಿದ್ದು, ಕೃಷ್ಣನ ಮೈ ಬಣ್ಣವನ್ನು ನೀಲಿ



ಪ್ರಕೃತಿ ಚಿತ್ರ



ಶ್ರೀಕೃಷ್ಣ ಜನಪದ ಶೈಲಿ



ವೈದ್ಯಕೀಯ ಚಿಕಿತ್ಸೆ

ಬಣ್ಣದಿಂದ ರಚಿಸಿದ್ದಾರೆ. ಇಲ್ಲಿ ಕೃಷ್ಣನು ಪೇಟಾವನ್ನು ಧರಿಸಿ ಕೈಯಲ್ಲಿ ಕೊಳಲನ್ನು ಹಿಡಿದಿರುವುದನ್ನು ಕಾಣಬಹುದು. ಈ ಚಿತ್ರದ ಮುಂದೆ ಸಣ್ಣ ಸಣ್ಣ ಗಿಡಗಳನ್ನು ಕಾಣಬಹುದು. ಕೃಷ್ಣನ ಎಡಭಾಗದಲ್ಲಿ ಒಂದು ದೊಡ್ಡ ಗಿಡವನ್ನು ರಚಿಸಿ ಕೊನೆಯಲ್ಲಿ ಒಂದೇ ಹೂವನ್ನು ರಚಿಸಿದ್ದಾರೆ. ಅವನ ಬಲಭಾಗದಲ್ಲಿ ಒಂದು ಮರವನ್ನು ರಚಿಸಿ ಆ ಮರದ ಬುಡದಿಂದ ಹಿಡಿದು ಅನೇಕ ವಿನ್ಯಾಸಗಳನ್ನು ರಚನೆ ಮಾಡಿದ್ದಾರೆ.ಒಂದು ಕೊಂಬೆಯಲ್ಲಿ ಕೋತಿಯು ಮರವನ್ನು ಹತ್ತುತ್ತಿರುವ ದೃಶ್ಯವನ್ನು ಕಂಡರೆ, ಅದೇ ರೆಂಬೆಯಲ್ಲಿ ಜೇನುಗೂಡು ಕಟ್ಟಿರುವುದನ್ನು ಕಾಣುತ್ತೇವೆ. ಅದರ ಮೇಲಿನ ರೆಂಬೆಯಲ್ಲಿ ಪಕ್ಷಿ, ಸಣ್ಣ ಸಣ್ಣ ಚಿಟ್ಟೆಗಳು, ನವಿಲು, ಕುಳಿತಿರುವ ಪಕ್ಷಿ, ಹಾರಿ ಬರುತ್ತಿರುವ ಪಕ್ಷಿ, ಮರಕುಟುಕ ಮತ್ತು ಸಣ್ಣ ಸಣ್ಣ ಎಲೆಗಳನ್ನು ಕಾಣಬಹುದು. ಕೆಳಭಾಗದಲ್ಲಿ ಒಂದು ನವಿಲು ತನ್ನ ಗರಿಗಳನ್ನು ಬಿಚ್ಚಿಕೊಂಡು ನರ್ತಿಸುತ್ತಿರುವುದನ್ನು ಕಾಣುತ್ತೇವೆ. ಇಲ್ಲಿ ಕಪ್ಪು ನೀಲಿ, ಹಳದಿ, ಕಡುಗೆಂಪು, ಬಣ್ಣಗಳನ್ನು ಲೇಪಿಸಿದ್ದಾರೆ.

### ವೈದ್ಯಕೀಯ ಚಿಕಿತ್ಸೆ

ಈ ಭಿತ್ತಿಚಿತ್ರವನ್ನು ಆಕಾಶರವರು ೨೦೦೮ರಲ್ಲಿ ಮೆಡಿಕಲ್ಸ್ ಕಾಲೇಜು ಗುಲ್ಬರ್ಗಾದ ಕಟ್ಟಡ ಪ್ರವೇಶ ಎಡಭಾಗದ ಗೋಡೆಗೆ ಭಿತ್ತಿ ಇದ್ದು, ೨೦x೬ ಅಡಿ ಅಳತೆಯನ್ನು ಹೊಂದಿದೆ.

ಈ ಭಿತ್ತಿ ಚಿತ್ರದಲ್ಲಿ ವೈಧ್ಯಕಿಯ ಯಾವ ರೀತಿ ಬೆಳೆದುಕೊಂಡು ಬಂದಿದೆ ಎಂಬುವುದನ್ನು ತೋರಿಸುತ್ತದೆ. ಚಿತ್ರದ ಎಡಭಾಗದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರ, ರಾಧಾ, ಕೃಷ್ಣ, ಅಮೃತಕ್ಕಾಗಿ ರಾಕ್ಷಸ ಮತ್ತು ದೇವಾನುದೇವತೆಗಳ ಕಿತ್ತಾಟ ರಾಮ ಲಕ್ಷಣ, ಹನುಮಂತ ಸಂಜೀವಿನಿಯನ್ನು ತರುತ್ತಿರುವುದು ಋಷಿಮುನಿಗಳ ಕಾಲದಲ್ಲಿ ಆಯುರ್ವೇದಿಕ ಚಿಕಿತ್ಸೆ ನೀಡುತ್ತಿರುವುದು, ಬುದ್ಧನ ಕಾಲದಲ್ಲಿ ಶಾಂತತೆ ಆಧುನಿಕ ಕಾಲದಲ್ಲಿ ಆಸ್ಪತ್ರೆಯಲ್ಲಿ ಚಿಕಿತ್ಸೆ ಸ್ಕ್ಯಾನಿಂಗನ್ನು ಪಡೆಯುತ್ತಿರುವ ಇವೆಲ್ಲ ಅದರ ಮೇಲೆ ಯಮನು ಕೋಣದ ಮೇಲೆ ಕುಳಿತಿರುವುದನ್ನು ಕಾಣುತ್ತೇವೆ. ಈ ಭಿತ್ತಿಚಿತ್ರದಲ್ಲಿ ನೀಲಿ, ಹಳದಿ, ಕೆಂಪು, ಹಸಿರು, ಕೇಸರಿ,ಬಿಳಿ, ಕಂದು ಬಣ್ಣಗಳನ್ನು ಮಾಡಿದ್ದು, ದೇವಾನುದೇವರುಗಳ ಕಾಲದಿಂದ ಆಧುನಿಕ ಕಾಲದವರೆಗೂ ನಡೆದುಕೊಂಡು ಬಂದಂತಹ ಚಿಕಿತ್ಸಾ ಪದ್ಧತಿಯನ್ನು ಕಾಣಬಹುದು.

### ಭಿತ್ತಿಚಿತ್ರ ರಚನಾ ವಿಧಾನ

ಭಿತ್ತಿಚಿತ್ರ ರಚನೆ ಮಾಡುವಾಗ ಮೊದಲ ಸಮತಟ್ಟಾಗಿರುವಂತ ಗೋಡೆಯ ಮೇಲೆ ಎಸ್.ಎಂ.ಎಲ್. ಬಿಳಿಯ ಬಣ್ಣವನ್ನು ಲೇಪಿಸಿ ನಂತರದಲ್ಲಿ ಆ ಸ್ಥಳಕ್ಕೆ ಹೊಂದಾಣಿಕೆಯಾಗುವಂತೆ ಕರುಡು ಚಿತ್ರವನ್ನು ರಚನೆ ಮಾಡಿಕೊಂಡು ಡ್ರಾಯಿಂಗ್ ಮಾಡಿಕೊಂಡು ಅದಕ್ಕೆ ಆಕ್ರಾಲಿಕ ಇಲ್ಲವೇ ಎನ್.ಎಂ.ಎಲ್ ಬಣ್ಣಗಳಿಂದ ಹೆಚ್ಚಾಗಿ ಭಿತ್ತಿಚಿತ್ರಗಳನ್ನು ರಚಿಸುತ್ತಾ ಬಂದಿದ್ದಾರೆ. ಇಲ್ಲಿ ಗಾಡ ಕೆಂಪು ಮತ್ತು ನೀಲಿ ಬಣ್ಣದ ಹಿನ್ನೆಲೆಯಲ್ಲಿ ಇಲ್ಲಿ ರಚನಾ ಮಾಡಿದಂತಹ ಭಿತ್ತಿಚಿತ್ರಗಳು ರೇಖಾಲಾವಣ್ಯ ಪೂರ್ಣ ಉತ್ತಮ ಸಂಯೋಜನೆಗಳಿಂದ ಕೂಡಿದ್ದು, ನಕ್ಷೆಯ ಮೂಲಭೂತ ತತ್ವಗಳನ್ನು ಇಲ್ಲಿ ದೃಶ್ಯರೂಪಕ್ಕೆ ಇಳಿಸಿರುವುದು. ವಿಶೇಷವಾಗಿ ಜಾಮಿತಿ ವಿನ್ಯಾಸದಿಂದ ಕೂಡಿದಂತಹ ಭಿತ್ತಿಚಿತ್ರಗಳನ್ನು ಎನ್.ಎಸ್.ಶಿಂಪಿಯವರು ರಚಿಸಿರುವುದನ್ನು ನೋಡಬಹುದು.

ಇದಕ್ಕೆ ಬಳಸುವ ಪರಿಕರಗಳು ಕುಂಚ, ಬಣ್ಣ, ಪೆನ್ಸಿಲ್, ಇತ್ಯಾದಿ ಪರಿಕರಗಳನ್ನು ಬಳಸಿದ್ದಾರೆ.

ಒಟ್ಟಾರೆಯಾಗಿ ಈ ಭಿತ್ತಿಚಿತ್ರಗಳ ಬಗ್ಗೆ ಹೇಳಬೇಕಾದರೆ ನಮ್ಮ ಹಿಂದಿನರಾಜ ವಂಶದವರು ಅಥವಾ ದೇವಾಸ್ಥಾನಗಳ ಭಿತ್ತಿಗಳ ಮೇಲೆ ಚಿತ್ರಗಳನ್ನು ರಚಿಸುತ್ತಿದ್ದರು. ಇದೇ ಮುಂದುವರೆದ ಭಾಗವಾಗಿ ಚಿತ್ರಕಲೆಯು ಕಲಾವಿದನ ಅಭಿವ್ಯಕ್ತಿ ಮಾಧ್ಯಮವಾಗಿ ಬದಲಾವಣೆಗೊಂಡು ಇಂದಿನ ಆಧುನಿಕ ಯುಗದಲ್ಲಿ ಈ ಭಿತ್ತಿಚಿತ್ರಕಲೆಯು ತನ್ನದೇ ವಿಶಿಷ್ಟವಾದ ಶೈಲಿಯಿಂದ ಬೆಳೆದುಕೊಂಡು ಬರುತ್ತಿರುವುದನ್ನು ಕಾಣುತ್ತೇವೆ. ಇದಕ್ಕೆ ಪೂರಕವಾಗಿ ಇಂದಿನ ಸಮಕಾಲೀನ ಕಲಾವಿದರು ಭಿತ್ತಿಯ ಮೇಲೆ ಸುಂದರವಾದಂತಹ ಚಿತ್ರಗಳನ್ನು ರಚಿಸಿ ಆ ಭಿತ್ತಿಯನ್ನು ಸೌಂದರ್ಯದ ಅಭಿವ್ಯಕ್ತಿಗೆ ಈಡುಮಾಡುತ್ತಿದ್ದಾರೆ.

* * *

ಅಧ್ಯಾಯ - ನಾಲ್ಕು

# ಗಾಜಿನ ಮಾಧ್ಯಮದ ಭಿತ್ತಿಚಿತ್ರ

ಹಲವಾರು ಕ್ಷೇತ್ರದಲ್ಲಿ ಪ್ರಭಾವ ಹೊಂದಿರುವ ಗಾಜನ್ನು ನಮ್ಮ ಕಲಾವಿದರು ಗಾಜಿನ ಮೇಲೆ ಸಾಂಪ್ರಾದಾಯಿಕ ಚಿತ್ರಗಳನ್ನು ರಚಿಸುತ್ತಿದ್ದುದ್ದನ್ನು ಕಾಣುತ್ತೇವೆ. ಕಾಲಬದಲಾದಂತೆಲ್ಲಾ ಸಂಸ್ಕೃತಿಯು ಬದಲಾಗುತ್ತೆ ಎಂಬಂತೆ ಗಾಜಿನ ಮಾಧ್ಯಮವನ್ನು ಆಧುನಿಕ ಯುವ ಪೀಳಿಗೆಯ ಕಲಾವಿದರು ಸಾಂಪ್ರದಾಯ ಕಲಾಕೃತಿಗಳ ರಚನೆಯನ್ನು ಬಿಟ್ಟು ಆಧುನಿಕವಾಗಿ ಹೊಸ ಹೊಸ ತಂತ್ರ ಆಲೋಚನೆಗಳನ್ನು ಮತ್ತು ಸೃಜನಾತ್ಮಕವಾಗಿ ವಿವಿಧ ಆಕಾರಗಳನ್ನು ಬಳಸಿಕೊಂಡು ಗಾಜಿನ ಭಿತ್ತಿಯನ್ನು ರಚನೆ ಮಾಡುತ್ತಿದ್ದಾರೆ. ಇದು ಒಂದು ನಾಜೂಕಾದಂತಹ ಮಾಧ್ಯಮ. ಈ ಮಾಧ್ಯಮಕ್ಕೆ ವೆಚ್ಚ ಕಡಿಮೆ ಇದ್ದು ಮತ್ತು ಸರಳ ರೀತಿಯಲ್ಲಿ ರಚನೆ ಪ್ರಾರಂಭವಾದ ಈ ಮಾಧ್ಯಮ ಪ್ರಸ್ತುತ ಸಂದರ್ಭದಲ್ಲಿ ತುಂಬಾ ಪ್ರಚಲಿತವಾಗಿ ಬೆಳೆಯುತ್ತಿರುವುದನ್ನು ಕಾಣಬಹುದು.

ಜಾಗತಿಕವಾಗಿ ಕಲೆಯ ಬೆಳವಣಿಗೆಯನ್ನು ಗಮನಿಸಿದಾಗ ಯಾವುದೇ ಕಲೆ ತೆಗೆದುಕೊಂಡರೂ ಆ ಕಲೆಯಲ್ಲಿ ಪ್ರಾಂತೀಯ ಪ್ರಭಾವಗಳೇ ದೂರವಾಗಿರುತ್ತವೆ. ಈ ಮಾತನ್ನು ಉತ್ಪ್ರೇಕ್ಷಿಸದೇ ಕಲಾಕೃತಿಯೊಂದೇ ಅನುಭವ ಮತ್ತು ಪ್ರಭಾವಗಳ ಗುಣಗಳನ್ನು ಸಾದೃಶ್ಯಗೊಳಿಸಿ ಕರಾಕರತಿಯೊಂದರ ನಿಜವಾದ ನೆಲೆ ಅನಾವರಣಗೊಳ್ಳುತ್ತವೆ. ಇದಕ್ಕೆ ಕಾರಣ ಕರ್ನಾಟಕದಲ್ಲಿ ಕಂಡು ಬರುವ ಗಾಜಿನ ಚಿತ್ರಗಳ ಅನ್ವಯವಾಗುತ್ತದೆ. ಕ್ರಿ.ಪೂ.೮ನೆಯ ಶತಮಾನದಿಂದ ೭ನೆಯ ಶತಮಾನದಲ್ಲಿ ಬಳಕೆಯಲ್ಲಿದ್ದ ಗಾಜಿನ ವಸ್ತುಗಳು ಮೆಸಪೋಟಾಮಿಯಾದಲ್ಲಿ ದೊರೆತಿವೆ. ಕ್ರಿ.ಪೂ.೭ನೆಯ ಶತಮಾನದಲ್ಲಿ ಸಿರಿಯಾ ದೇಶದಲ್ಲಿ ಗಾಜಿನ ಕುಶಲಕರ್ಮಿಗಳು ಗಾಜಿನ ಕೆಲಸವನ್ನು ಅಭಿವೃದ್ಧಿಪಡಿಸಿದರು.

೧೭ ಮತ್ತು ೧೮ನೇ ಶತಮಾನದಲ್ಲಿ ಗಾಜಿನ ಮಾಧ್ಯಮ ಭಾರತಕ್ಕೆ ಪ್ರವೇಶಿಸಿತು. ಪ್ರಾಚೀನತೆಯ ಬಗ್ಗೆ ಅನೇಕ ಆಧಾರಗಳು ದೊರಕುತ್ತವೆ.[೧] ರಾಮಾಯಣ ಮಹಾಭಾರತ ಮಹಾಕಾವ್ಯಗಳಲ್ಲಿ ಗಾಜಿನ

೧. ಎನ್.ಎಂ.ಅಂಗಡಿ : ಕರ್ನಾಟಕದ ಗಾಜಿನ ಮೇಲಿನ ಚಿತ್ರಕಲೆ, ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ, ಕ.ವಿ.ವಿ., ಹಂಪಿ, ಪುಟ-೨೪೮

ಕಲಾತ್ಮಕ ವಸ್ತುಗಳು ಗಾಜಿನ ಕನ್ನಡಿಯ ಮೇಲೆ ಚಿತ್ರಿಸಿರುವ ಕಲಾಕೃತಿಗಳ ಬಗ್ಗೆ ಹಲವಾರು ಉಲ್ಲೇಖಗಳಿವೆ. ಭಾರತದಲ್ಲಿ ಮೊಗಲರ ಆಡಳಿತ ಸಮಯದಲ್ಲಿ ಗಾಜಿನ ಭಿತ್ತಿಚಿತ್ರಗಳನ್ನು ಕಾಣಬಹುದಾಗಿದೆ. ಮೊಗಲ ಕಾಲದಲ್ಲಿ ಹೆಚ್ಚು ಅಭಿವೃದ್ಧಿ ಹೊಂದಿತು. ೧೮ನೇ ಶತಮಾನದಲ್ಲಿ ಕೇರಳದ ಪದ್ಮನಾಭ ದೇವಸ್ಥಾನದಲ್ಲಿ ಒಂದು ಭಿತ್ತಿಚಿತ್ರವನ್ನು ಕಾಣಬಹುದು. ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೨ನೇ ಶತಮಾನದಲ್ಲಿ ಗಾಜಿನ ಮಾಧ್ಯಮದ ಭಿತ್ತಿಚಿತ್ರಗಳನ್ನು ಕಾಣಬಹುದು, ೧೮/೧೯ನೇ ಶತಮಾನದಲ್ಲಿ ಮೈಸೂರಿನಲ್ಲಿ ಗಾಜಿನ ಚಿತ್ರಗಳು ರಚನೆಯಾಗಿರುವುದನ್ನು ಕಾಣಬಹುದು.[೨]

ಗಾಜಿನ ಚಿತ್ರಕಲೆಯಲ್ಲಿ ಈ ಆಧುನಿಕ ಕಲಾವಿದರು ಅನೇಕ ರೀತಿಯ ಪ್ರಯೋಗಗಳನ್ನು ನಡೆಸುತ್ತಿದ್ದಾರೆ. ಇಂತಹ ಕಲಾಕೃತಿಗಳನ್ನು ಹೆಚ್ಚಾಗಿ ಹೊಟೇಲ್, ಅರಮನೆ, ಚರ್ಚು ಮುಂತಾದೆಡೆಗಳಲ್ಲಿ ಉಪಯೋಗಿಸುತ್ತಿದ್ದು, ಕಾಲ ಬದಲಾದಂತೆಲ್ಲಾ ಗಾಜಿನ ಮಾಧ್ಯಮಕ್ಕೆ ಬೇಡಿಕೆ ಬಂದಂತಾಗಿದೆ. ಆಧುನಿಕ ಕಾಲದಲ್ಲಿ ಪ್ರತಿಯೊಬ್ಬ ಕಲಾವಿದನು ವಿವಿಧ ರೀತಿಯ ವಿನ್ಯಾಸಗಳನ್ನು ಮತ್ತು ಅವನಲ್ಲಿರುವ ಹೊಸ ರೀತಿಯಾದ ಆಲೋಚನೆಗಳನ್ನು ಗಾಜಿನ ಮಾಧ್ಯಮದಲ್ಲಿ ರಚನೆ ಮಾಡುವುದರಿಂದ ಆಧುನಿಕ ಕಾಲದಲ್ಲಿ ಜನತೆ ಹೆಚ್ಚು ಇಷ್ಟ ಪಡುತ್ತಿದ್ದರೆಂದು ಗಾಜಿನ ಮಾಧ್ಯಮದಲ್ಲಿ ಚಿತ್ರಗಳನ್ನು ಮಾಡುವಂತಹ ಕಲಾವಿದ ಉಮಾಶಂಕರರವರ ಅಭಿಪ್ರಾಯವಾಗಿದೆ.

### ಮೀನುಗಳ ಓಡಾಟ

ಈ ಗಾಜಿನ ಮಾಧ್ಯಮವನ್ನು ಬೆಂಗಳೂರಿನ ಉಮಾ ಶಂಕರ್‌ರವರು ೨೦೦೧ರಲ್ಲಿ ರಚಿಸಿದ್ದು, ೨x೨ ೧/೨ ಅಡಿ ಅಳತೆಯನ್ನು ಹೊಂದಿದೆ.

ಈ ಚಿತ್ರದಲ್ಲಿ ಡಾಲ್‌ಫಿನ್ ಮೀನುಗಳ ಸ್ವತಂತ್ರವಾಗಿ ನೀರ್ಭಿತಿಯಿಂದ ಓಡಾಡುತ್ತಿರುವುದನ್ನೇ ಕಾಣಬಹುದು. ಕೆಲವು ಮೀನುಗಳು ನೀರಿನ ಮೇಲಕ್ಕೆ ಜಿಗಿಯುತ್ತಿದ್ದು, ನೀರಿನ ಅಲೆಗಳು ಒಮ್ಮುತ್ತಿರುವುದನ್ನು ಕಾಣುತ್ತೇವೆ. ಇಲ್ಲಿ ಮೀನಿನ ಆಕೃತಿಯನ್ನು ಡಾಲ್‌ಪಿಲ್‌ರೀತಿಯ ಚಿತ್ರಿಸಿದ್ದು, ಮುಖಕ್ಕೆ ಕಂದುಗೆಂಪು ಬಣ್ಣದಿಂದ ಕೂಡಿದ್ದು. ಮೈಬಣ್ಣವನ್ನು ಬೂದುಬಣ್ಣದಿಂದ ಕೂಡಿದ್ದು, ಹೊಟ್ಟೆಯ ಕೆಳಭಾಗದಲ್ಲಿ ಬಿಳಿ ಮತ್ತು ಆಳತೆ ಬಣ್ಣದ ಮಿಶ್ರಿತವಾಗಿದೆ. ಕಣ್ಣಿನ ಭಾಗವನ್ನು ಕಪ್ಪು ಬಣ್ಣದಿಂದ ಚಿತ್ರಿಸಿದ್ದು, ನೀರಿನ ಅಲೆಗಳು ಕಪ್ಪು ಮತ್ತು ನೀಲಿಬಣ್ಣದಿಂದ ಚಿತ್ರಿಸಿದ್ದಾರೆ. ನೀರಿನ ಅಲೆಗಳಿಗೂ ಸಹ ಮುಂದಿನ ಭಾಗವನ್ನು ದಪ್ಪ ಬಣ್ಣದಿಂದ ಮಾಡಿದ್ದು, ಹಿಂದೆ ಹೋದಂತೆಲ್ಲಾ ಎಷ್ಟೇ ದೂರ ಇರುವ ಹಾಗೆ ತೋರಿಸಿದ್ದಾರೆ. ಆಕಾಶ ಬಣ್ಣವನ್ನು ನೀಲಿ ಮತ್ತು ಬಿಳಿಯ ಬಣ್ಣದಿಂದ ರಚಿಸಿದ್ದು, ಅತಿ ಸುಂದರವಾಗಿ ಕಾಣುತ್ತದೆ. ಈ ಚಿತ್ರವನ್ನು ಒಟ್ಟಾರೆ ಗಮನಿಸಿದರೆ ಎಲ್ಲವೂ ಪಾಸ್ಪೆಕ್ಟಿವ್ ಅನ್ನು ಬಳಸಿ ಚಿತ್ರಾಕೃತಿಯನ್ನು ರಚಿಸಿದ್ದಾರೆ.

### ಜಾಮಿತಿಕ ವಿನ್ಯಾಸ

ಗಾಜಿನ ಚಿತ್ರವನ್ನು ಬೆಂಗಳೂರಿನ ಉಮಾಶಂಕರರವರು ೨೦೦೮ರಲ್ಲಿ ರಚಿಸಿದ್ದು ೨x೨ ಅಡಿ ಅಳತೆಯನ್ನು ಹೊಂದಿದೆ.

೨. ಎನ್.ಎಂ.ಅಂಗಡಿ : ಕರ್ನಾಟಕದ ಗಾಜಿನ ಮೇಲಿನ ಚಿತ್ರಕಲೆ, ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ, ಕ.ವಿ.ವಿ., ಹಂಪಿ, ಪುಟ-೨೪೯



ಗಾಜಿಗೆ ಸ್ವರೂಪ ಕೊಡುತ್ತಿರುವ ಕಲಾವಿದ



ಮೀನುಗಳ ಹೋಡಾಟ

ಈ ಚಿತ್ರದಲ್ಲಿ ಜಾಮಿತಿಕವಾದ ಆಕಾರಗಳನ್ನು ಬಳಸಿಕೊಂಡು ರಚನೆ ಮಾಡಿರುವುದನ್ನು ಕಾಣುತ್ತೇವೆ. ಇಲ್ಲಿ ಅನೇಕ ಬಣ್ಣಗಳನ್ನು ಉಪಯೋಗಿಸಿ ಬಣ್ಣಗಳಲ್ಲಿಯೇ ವಿವಿಧ ರೀತಿಯ ಮೈವಳಿಕೆಯನ್ನು ತೆಗೆದಿರುವುದನ್ನು ಕಾಣುತ್ತೇವೆ. ಭಾಗ ಒಂದರಲ್ಲಿ ಕಂದು ಹಸಿರು ಬಿಳಿಯ ಬಣ್ಣಗಳನ್ನು ಉಪಯೋಗಿಸಿ ಹೊರ ರೇಖೆಗಳು ಕಾಣುವಂತೆ ಬಣ್ಣವನ್ನು ಲೇಪಿಸಿದ್ದಾರೆ. ಎರಡನೆಯ ಭಾಗದಲ್ಲಿಯೂ ಸಹ ಹಸಿರು, ನೀಲಿ, ಹಳದಿ, ಕೆಂಪು, ಬಿಳಿಯ ಬಣ್ಣವನ್ನು ಉಪಯೋಗಿಸಿ ನೋಡುಗರಿಗೆ ಆಕರ್ಷಣೀಯವಾಗುವಂತೆ ತೋರಿಸಿದ್ದಾರೆ. ಮೂರನೆಯ ಚಿತ್ರದಲ್ಲಿ ಹೆಚ್ಚಾಗಿ ಕೆಲಸ ಮಾಡಿಲ್ಲವಾದರೂ ನೋಡುವುದಕ್ಕೆ ಅಂದವಾಗಿ ಕಾಣುತ್ತದೆ. ಒಟ್ಟಾರೆ ಹೇಳಬೇಕಾದರೆ ಇದು ಒಂದು ಸೀರಿಸ್ ರಚನೆಯ ಗಾಜಿನ ಚಿತ್ರವಾಗಿದೆ.

ಅಮೂರ್ತ ಸ್ವರೂಪ

ಈ ಗಾಜಿನ ಚಿತ್ರವನ್ನು ಬೆಂಗಳೂರಿನ ಉಮಾಶಂಕರ್‌ರವರು ೨೦೧೦ರಲ್ಲಿ ರಚಿಸಿದ್ದು ೨x೩ ಅಡಿ ಅಳತೆಯನ್ನು ಹೊಂದಿದೆ.

ಈ ಚಿತ್ರದಲ್ಲಿ ಜಾಮಿತಿ ಆಕಾರಗಳನ್ನು ಬಳಸಿಕೊಂಡು ಸಂಯೋಜನೆಯನ್ನು ಮಾಡಿರುವುದು ಕಂಡುಬರುತ್ತದೆ. ಚಿತ್ರದ ಮಧ್ಯಭಾಗದಲ್ಲಿ ವೃತ್ತಾಕಾರವಾಗಿ ರಚಿಸಿ ಅದಕ್ಕೆ ನೀಲಿಬಣ್ಣವನ್ನು ಲೇಪಿಸಿದ್ದಾರೆ. ಅದರ ಪಕ್ಕದಲ್ಲಿಯೇ ಮತ್ತೊಂದು ವೃತ್ತವನ್ನು ತೆಗೆದು ಅದರೊಳಗೆ ಮತ್ತೆ ಮೂರು ವೃತ್ತಗಳನ್ನು ರಚಿಸಿ ಅದಕ್ಕೆ ಹೊರ ರೇಖೆ ರಚಿಸಿದ್ದಾರೆ. ಇದರೊಳಗೆ ಕಂದು, ಹಳದಿ,ಬೂದು, ಕೆಂಪು, ವರ್ಣಗಳನ್ನು ಲೇಪಿಸಿದ್ದಾರೆ. ಇನ್ನೊಂದು ವೃತ್ತವನ್ನು ರಚಿಸಿ ಇದಕ್ಕೆ ಬಣ್ಣ ಲೇಪಿಸಿಲ್ಲವಾದರೂ ಸುಂದರವಾಗಿ ಕಾಣಿಸುತ್ತದೆ. ಅದರ ಮೇಲಿನ ಭಾಗದಲ್ಲಿ ಮೋಡಗಳಂತೆ ಹೋಲಿಕೆಯಾಗುವುದನ್ನು ನೀಲಿ ಮತ್ತು ಕೇಸರಿ, ಬಣ್ಣಗಳಿಂದ ರಚಿಸಿದ್ದು ಅದರ ಕೆಳಗೆ ಆಯುತಕಾರವಾದ ವಿನ್ಯಾಸ ರಚಿಸಿ ನೀಲಿ ಮತ್ತು ಬೂದು ಬಣ್ಣವನ್ನು ಲೇಪಿಸಿದ್ದಾರೆ. ಕೆಳಭಾಗದಲ್ಲಿ ಅರ್ಧವರ್ತುಳವಿರುವಂತೆ ರಚಿಸಿ ಹಳದಿ, ಕೆಂಪು, ಬಣ್ಣಗಳನ್ನು ಉಪಯೋಗಿಸಿದ್ದಾರೆ.

ಈ ಚಿತ್ರದಲ್ಲಿ ಒಟ್ಟಾರೆ ರೇಖೆಗಳನ್ನು ಹೆಚ್ಚಾಗಿ ಬಳಸಿಕೊಂಡು ರೇಖಾಪ್ರಧಾನ ಚಿತ್ರವಾಗಿದೆ.

ನಿಸರ್ಗ

ಗಾಜಿನ ಚಿತ್ರವನ್ನು ಮೈಸೂರಿನ ಹನುಮಂತ ಸಂಧಿಮನಿಯವರು ೨೦೧೧ ರಲ್ಲಿ ರಚಿಸಿದ್ದು೨x೪ ಅಡಿ ಅಳತೆಯನ್ನು ಹೊಂದಿದೆ. ಈ ಚಿತ್ರದಲ್ಲಿ ಕಲಾವಿದನು ನಿಸರ್ಗವನ್ನು ದೃಷ್ಠಿಯಲ್ಲಿಟ್ಟುಕೊಂಡು ನೀರು ತಟಸ್ಥವಾಗಿದ್ದ ನೀರಿನ ಮೇಲೆ ಉದುರುತ್ತಿರುವಂತಹ ಹನಿಗಳನ್ನು ಕಾಣಬಹುದು. ನೀರಿನ ಮೇಲೆ ಬಿದ್ದಾಗ ಆ ನೀರು ವೃತ್ತಾಕಾರದ ಅಲೆಗಳಾಗಿ ಚಲಿಸಿದಂತೆ ಕಂಡುಬರುತ್ತದೆ. ಆ ನೀರಿನ ಬಣ್ಣವನ್ನು ನೀಲಿ ಮತ್ತು ಹಸಿರು ಮಿಶ್ರಿತವಾದ ಬಣ್ಣವನ್ನು ಉಪಯೋಗಿಸಿದ್ದಾರೆ. ನೀರಿನ ಮೇಲೆ ಎರಡು ಬ್ರಹ್ಮ ಕಮಲದ ಹೂವುಗಳನ್ನು ಕಾಣುತ್ತೇವೆ. ಆ ಹೂವುಗಳ ಅನೇಕ ದಳಗಳ್ನು ಹೊಂದಿದ್ದ ನೋಡುಗರ ಮನಸ್ಸನ್ನು ಆಕರ್ಷಿಸುತ್ತದೆ. ಕಮಲದ ಹೂವಿನ ಕೆಳಭಾಗದಲ್ಲಿ ದೊಡ್ಡದಾದ ಎಲೆಯನ್ನು ಚಿತ್ರಿಸಿದ್ದು, ಅದು ಹಸಿರು

ಮತ್ತು ಬಿಳಿಯ ಬಣ್ಣದಿಂದ ಆಕರ್ಷಿತವಾಗಿದೆ. ಮೇಲಿನ ಭಾಗದಲ್ಲಿ ಎಳೆಎಳೆಯಾಗಿ ಬಂದಿರುವುದರ ಮೇಲೆ ನೀರಿನ ಹನಿಗಳು ಬೀಳುತ್ತಿದ್ದು, ಇಲ್ಲಿ ಕಲಾವಿದನು ತನ್ನಲ್ಲಿರುವ ಹೊಸತನವನ್ನು ಅಭಿವ್ಯಕ್ತಪಡಿಸಿದ್ದಾನೆ. ಇಲ್ಲಿ ಹಳದಿ, ಕಂದು, ಕೆಂಪು ಬಣ್ಣಗಳನ್ನು ಕಾಣಬಹುದು. ಒಟ್ಟಾರೆ ಹೇಳಬೇಕಾದರೆ ಕಲಾವಿದನು ನಿಸರ್ಗದ ದೃಷ್ಟಿಯಿಂದ ಈ ಚಿತ್ರವನ್ನು ರಚಿಸಿದ್ದಾರೆ.

**ಅಮೂರ್ತ ಸ್ವರೂಪ**

ಗಾಜಿನ ಚಿತ್ರವನ್ನು ಮೈಸೂರಿನ ಹನುಮಂತ ಸಂದಿಮನಿ ಎಂಬುವವರು ೨೦೧೨ರಲ್ಲಿ ರಚಿಸಿದ್ದು, ೨x೪ ಅಡಿ ಅಳತೆಯನ್ನು ಹೊಂದಿದ್ದಾಗಿದೆ. ಈ ಚಿತ್ರದಲ್ಲಿ ವಿವಿಧ ರೀತಿಯ ವೃತ್ತಾಕಾರಗಳನ್ನು ಬಳಸಿಕೊಂಡು ವಿವಿಧ ಬಣ್ಣಗಳ ಮೂಲಕ ರಚನೆ ಮಾಡಿರುವುದನ್ನು ಕಾಣುತ್ತೇವೆ. ಇಲ್ಲಿ ವಿವಿಧ ನಮೂನೆಯ ಮೈವಳಿಕೆಯನ್ನು ತೆಗೆದಿರುವುದನ್ನು ಮತ್ತು ಸುರುಳಿ ವಿನ್ಯಾಸದಲ್ಲಿ ರೇಖೆಗಳನ್ನು ಹಾಕಿ ಅದರ ತುದಿಯಲ್ಲಿವೃತ್ತಾಕಾರವನ್ನು ನಿರ್ಮಿಸಿ ಕೆಂಪು ಮತ್ತು ಹಳದಿ ಬಣ್ಣದಿಂದ ಕೂಡಿದೆ. ಆಯುತಕಾರದಿಂದ ಕೂಡಿದ ಸಣ್ಣ ಸಣ್ಣ ಮೆಟ್ಟಿಲುಗಳ ರೀತಿಯಲ್ಲಿ ರಚನೆ ಮಾಡಿ ತೆಳುವರ್ಣದೆಡೆಗೆ ವರ್ಣಲೇಪನ ಮಾಡಿರುವುದನ್ನುನೋಡುತ್ತೇವೆ. ಒಟ್ಟಾರೆಯಾಗಿ ನೋಡುಗರಿಗೆ ಆಕರ್ಷಿಕವಾಗುವಂತೆ ತೋರುತ್ತದೆ.

**ಮಹಿಳೆ ಮತ್ತು ಕೊಕ್ಕರೆ**

ಮಹಿಳೆ ಮತ್ತು ಕೊಕ್ಕರೆ ಈ ಸಂಯೋಜನೆಯನ್ನು ಬೆಳಗಾಂವಿ ಜಿಲ್ಲೆಯ ಗೋಕಾಕ ತಾಲೂಕಿನ ಶಿವು ದೇಶನೂರು ಎಂಬುವವರು ೨೦೦೪ರಲ್ಲಿ ರಚಿಸಿದ್ದು, ೪x೮ ಅಡಿ ಅಳತೆಯನ್ನು ಹೊಂದಿದ್ದು ಗಾಜಿನ ಮಾಧ್ಯಮದ ಮೇಲೆ ರಚಿಸಿದ್ದಾರೆ.

ಈ ಚಿತ್ರದಲ್ಲಿ ನದಿಯ ತೀರದ ಸೂರ್ಯ ಮುಳುಗುವ ವೇಳೆಯಲ್ಲಿ ಮಹಿಳೆಯು ತನ್ನ ಗಲ್ಲಕ್ಕೆ ಕೈಯನ್ನು ಊರಿ ಉದ್ದನೆಯ ಕೂದಲುಗಳು ಕಪ್ಪು ಮತ್ತು ಕಂದುಬಣ್ಣದಿಂದ ಕೂಡಿದ್ದು. ಗುಲಾಬಿ ಬಣ್ಣದ ರವಿಕೆಯನ್ನು ತೊಟ್ಟಿದ್ದು ಅದರ ಮೇಲೆ ಕೆಂಪು, ಹಳದಿ, ನೀಲಿ ಬಣ್ಣಗಳನ್ನು ಕಾಣುತ್ತೇವೆ. ತೆಳು ನೀಲಿಯ ಬಣ್ಣದ ವಸ್ತ್ರವನ್ನು ಧರಿಸಿದ್ದಾಳೆ. ಕೊಕ್ಕರೆಗಳನ್ನು ವೀಕ್ಷಿಸುತ್ತಿರುವುದನ್ನು ಕಾಣಬಹುದು. ನಾಲ್ಕು ಕೊಕ್ಕರೆಗಳು ವಿವಿಧ ಆಯಾಮಗಳಲ್ಲಿ ನಿಂತಿರುವುದರನ್ನು ಕಾಣುತ್ತೇವೆ. ಅದರ ಕೊಕ್ಕಿನ ಬಣ್ಣವನ್ನು ಹಳದಿಬಣ್ಣದಿಂದ ತಲೆಯ ಬಣ್ಣವನ್ನು ಕೆಂಪು ಕುತ್ತಿಗೆಯ ಭಾಗದ ಹತ್ತಿರ ಹಳದಿ ಅದರ ಕೆಳಗೆ ನೀಲಿ ಕಣ್ಣುಗಳನ್ನು ಬಿಳಿಯ ಬಣ್ಣದಿಂದ ಕಾಲುಗಳನ್ನು ಹಳದಿ ಬಣ್ಣದಿಂದ ರಚಿಸಿದ್ದಾರೆ. ಸೂರ್ಯನನ್ನು ಕಂದುಗೆಂಪು ಮತ್ತು ಹಳದಿ ಬಣ್ಣದಿಂದ ಚಿತ್ರಿಸಿದ್ದು ಮಹಿಳೆಯ ಹಿಂದಿನ ಭಾಗದಲ್ಲಿ ಪಕ್ಷಿಯೊಂದು ಹಾರುತ್ತಿರುವುದನ್ನು ಕಾಣುತ್ತೇವೆ. ಆಕಾಶ ಬಣ್ಣವನ್ನು ತೆಳು ಹಳದಿ, ಕೆಂಪು ಮಿಶ್ರಿತವಾಗಿ ಬಣ್ಣವನ್ನು ಲೇಪಸಿದ್ದಾರೆ. ನೀರನ್ನು ತೆಳುನೀಲಿ ಸ್ವಲ್ಪ ಬೂದು ಬಣ್ಣದಿಂದ ರಚಿತಗೊಂಡಿದೆ.



ಅಮೂರ್ತ ಸ್ವರೂಪ



ನಿಸರ್ಗ



ಕೊಕ್ಕರೆ ಮತ್ತು ಮಹಿಳೆ

### ಕಮಲದ ಹೂವು

ಕಮಲ ವಿನ್ಯಾಸವನ್ನು ಹೊಂದಿರುವ ಈ ಸಂಯೋಜನೆಯನ್ನು ಚಿಕ್ಕಮಂಗಳೂರಿನ ಚೇತನ ಎಂಬುವವರು ೨೦೦೭ರಲ್ಲಿ ರಚಿಸಿದ್ದು ೩x೪ ಅಳತೆಯನ್ನು ಹೊಂದಿದ್ದು, ಗಾಜಿನ ಮಾಧ್ಯಮದ ಮೇಲೆ ರಚಿಸಿದಾರೆ. ಕಮಲದ ಹೂವನ್ನು ಗುಲಾಬಿ ಬಣ್ಣದಿಂದ ಲೇಪಿಸಿದ್ದು, ಅದರ ಹಿಂದೆ ನೀಲಿ ಮತ್ತು ಹಳದಿಯ ಬಣ್ಣದಿಂದ ಲೇಪಿಸಿ, ಅದರ ಎರಡು ಕಡೆಗಳಿಗೆ ಗಾಜಿನ ಪಟ್ಟಿಯನ್ನು ಹಚ್ಚಿದ್ದಾರೆ. ಕಮಲದ ಹೂವಿನ ಕೆಳಭಾಗದಲ್ಲಿ ಗಾಜಿನ ಮೂರು ಪಟ್ಟಿಕೆಗಳನ್ನು ಹಾಕಿದ್ದು, ಮೇಲಿನ ಪಟ್ಟಿಗೆ ಅಡ್ಡಪಟ್ಟಿಗಳನ್ನು ಹಾಕಿರುವುದನ್ನು ಕಾಣುತ್ತೇವೆ. ಇದರ ಹಿಂದೆ ವಿನ್ಯಾಸ ರೂಪದಲ್ಲಿರುವಂತೆ ಎಲೆಗಳನ್ನು ಕಾಣುತ್ತೇವೆ. ಆ ಎಲೆಗಳ ಭಾಗವನ್ನು ಹಸಿರು ಮತ್ತು ಹಳದಿ ಬಣ್ಣದಿಂದ ಹಿನ್ನೆಲೆಯನ್ನು ತೆಳುಕೇಸರಿಯ ಬಣ್ಣದಿಂದ ಲೇಪಿಸಿ ಕೆಳಗೆ ಬಂದಂತೆಲ್ಲಾ ತೆಳು ನೀಲಿ ಬಣ್ಣದಿಂದ ಪೂರ್ಣಗೊಳಿಸಿದ್ದಾರೆ.

### ಫಲಹಾರದ ಬುಟ್ಟಿ

ಫಲಹಾರದ ಬುಟ್ಟಿ ಮತ್ತು ಜಾಮಿತಿ ಮತ್ತು ಆಕಾರಗನ್ನೊಳಗೊಂಡು ಈ ಸಂಯೋಜನೆಯನ್ನು ಚಿಕ್ಕಮಂಗಳೂರಿನ ಚೇತನ ಎಂಬುವವರು ೨೦೧೯ರಲ್ಲಿ ರಚಿಸಿದ್ದು, ೨x೪ ಅಳತೆಯನ್ನು ಹೊಂದಿದೆ. ಈ ಚಿತ್ರದಲ್ಲಿ ವಿವಿಧ ರೀತಿಯ ಜಾಮಿತಿಕ ಆಕಾರಗಳನ್ನು ಬಳಸಿಕೊಂಡು ಕೆಲವು ಕಡೆಗಳಲ್ಲಿ ಆ್ಯಸಿಡ್‌ನಿಂದ ಮೈವಳಿಕೆಯನ್ನು ತೆಗೆದು ಅದಕ್ಕೆ ಬಣ್ಣವನ್ನು ಲೇಪಿಸುವುದನ್ನು ಕಾಣುತ್ತೇವೆ. ಚಿತ್ರದ ಕೆಳಭಾಗದಲ್ಲಿ ವಿವಿಧ ಬಗೆಯ ಮೈವಳಿಕೆಯನ್ನು ತೆಗೆದು ನೀಲಿ ಮತ್ತು ಹಳದಿ ಬಣ್ಣದಿಂದ ಕಾಣುತ್ತಿದ್ದು ಮಧ್ಯಭಾಗದ ವರ್ತುಲವನ್ನು ಕೆಂಪು ಮತ್ತು ಹಳದಿ ಅದರ ಮಧ್ಯದ ವರ್ತುಲವನ್ನು ನೀಲಿ ಬಣ್ಣದಿಂದ ರಚಿಸಿದ್ದಾರೆ.

ಮಧ್ಯಭಾಗದಲ್ಲಿ ಒಂದು ಬುಟ್ಟಿಯು ಹಳದಿ ಬಣ್ಣದಿಂದ ಅದರ ಮೇಲೆ ವಿವಿಧ ಬಗೆಯ ಹಣ್ಣುಹಂಪಲುಗಳನ್ನು ಇಟ್ಟಿದ್ದಾರೆ. ಒಟ್ಟಾರೆಯಾಗಿ ಕಲಾಕೃತಿಯು ಆಕರ್ಷಕವಾಗಿದೆ.

### ವೃತ್ತಾವಿನ್ಯಾಸ

ವೃತ್ತ ವಿನ್ಯಾಸದ ಸಂಯೋಜನೆಯನ್ನು ಶಿವಮೊಗ್ಗದ ಬದ್ರಿ ನಾರಾಯಣ ಎಂಬುವವರು ೨೦೦೭ರಲ್ಲಿ ರಚಿಸಿದ್ದು ೪x೪ ಅಡಿ ಅಳತೆಯನ್ನು ಹೊಂದಿದೆ. ಗಾಜಿನ ಮಾಧ್ಯಮದಲ್ಲಿ ರಚನೆಯಾಗಿದೆ.

ಈ ಚಿತ್ರದಲ್ಲಿ ವಿವಿಧ ರೀತಿಯ ಹೂಗಳ ವಿನ್ಯಾಸವನ್ನು ರಚಿಸಿದ್ದು, ಮಧ್ಯದ ಭಾಗದಲ್ಲಿರುವಂತಹ ಹೂವನ್ನು ಕಂದುಗೆಂಪು ಬಣ್ಣದಿಂದ ಚಿತ್ರಿಸಿದ್ದು ನಂತರ ವೃತ್ತದಲ್ಲಿ ಹಸಿರು ಬಣ್ಣದಿಂದ ಎಲೆ ಮತ್ತು ಮುಗ್ಗು ಆಕಾರಗಳನ್ನು ಮತ್ತು ಮೂರನೆಯ ವೃತ್ತದಲ್ಲಿಹಳದಿ ಮತ್ತು ಕೆಂಪು ಬಣ್ಣದಿಂದ ಹೂವುಗಳ ದಳಗಳನ್ನು ರಚಿಸಿದ್ದು, ಹಸಿರು ಬಣ್ಣದಿಂದ ಎಲೆಗಳನ್ನು ಚಿತ್ರಿಸಿದ್ದಾರೆ.

### ಜನಪದ ಶೈಲಿ

ಜನಪದ ಶೈಲಿಯ ಸಂಯೋಜನೆಯನ್ನು ಶಿವಮೊಗ್ಗ ಬದ್ರಿನಾರಾಯಣ ಎಂಬುವರು ೨೦೧೧ರಲ್ಲಿ ರಚಿಸಿದ್ದು, ೪x೪ ಅಡಿ ಅಳತೆಯಲ್ಲಿ ಇದ್ದು ಗಾಜಿನ ಮಾಧ್ಯಮದ ಮೇಲೆ ರಚಿಸಿದ್ದಾರೆ.

ಈ ಚಿತ್ರದಲ್ಲಿ ಜನಪದಕ್ಕೆ ಸಂಬಂಧಪಟ್ಟಂತಹ ಸೂರ್ಯನನ್ನು ಕಾಣುತ್ತೇವೆ. ನಡುವೆ ಒಂದು ಚಕ್ರ. ಚಕ್ರದ ಮಧ್ಯದಲ್ಲಿ ಜನಪದ ಶೈಲಿಗೆ ಹೋಲುವ ಜನರು ಇನ್ನೊಂದೆಡೆಯಲ್ಲಿ ದೇವಾಲಯಕ್ಕೆ ಹೋಗುತ್ತಿರುವ ಡೊಳ್ಳು ಹೊಡೆಯುತ್ತಿರುವ ಮತ್ತೊಂದು ಭಾಗದಲ್ಲಿ ಮೇಕೆ ಮೇಯಿಸುತ್ತಿರುವ ಪೀಪಿ ಊದುತ್ತಿರುವ ಮತ್ತು ಹಳ್ಳಿಗೆ ಸಂಬಂಧಿಸಿದಂತೆ ಹಲವಾರು ಚಿತ್ರಗಳನ್ನು ರಚಿಸಿದ್ದು, ಎಡಭಾಗದ ಮೂಲೆಯಲ್ಲಿ ಮೂರು ಪಕ್ಷಿಗಳು ಹಾರುತ್ತಿರುವುದನ್ನು ನೋಡುತ್ತೇವೆ. ಇಲ್ಲಿ ಹಸಿರು ಕೇಸರಿ ಬಣ್ಣಗಳಿಂದ ಕಲಾಕೃತಿಯನ್ನು ಪೂರ್ಣಗೊಳಿಸಿ ಬಿಳಿಯ ಬಣ್ಣದಿಂದ ಚಿತ್ರಗಳ ರಚನೆ ಮತ್ತು ಹೊರ ರೇಖೆಗಳನ್ನು ಹಾಕಿದ್ದಾರೆ.

## ಗಾಜಿನ ಮಾಧ್ಯಮದ ರಚನಾ ವಿಧಾನ

ಗಾಜಿನ ಮೇಲೆ ಚಿತ್ರ ರಚಿಸಬೇಕಾದರೆ ಮೊದಲು ಗಾಜಿನ ಅಳತೆಯ ತಕ್ಕಂತೆ ಒಂದು ಕರುಡುಚಿತ್ರವನ್ನು ರಚಿಸಬೇಕು. ನಂತರದಲ್ಲಿ ನಮಗೆ ಬೇಕಾದ ಡಿಸೈನ್ ಅಥವಾ ಗ್ರಾಹಕರು ಹೇಳಿದ ಡಿಸೈನ್ ಮಾಡಿಕೊಂಡು ಪಾಲಿಶ್ ಮಾಡಬೇಕು. ಒಂದು ಭಾಗಕ್ಕೆ ಪ್ರೈ ಗ್ಲಾಸ್ ಮರಳಿನಿಂದ ಕಪ್ಪು ಮಾಡಿಕೊಂಡು ಡೀಪ್ ಕಲರಿಂಗ್ ಒಂದು ಲೇಯರ್ ಹಾಕಿದ ನಂತರ ಮಲ್ಪಿ ಮಾಡಿಕೊಳ್ಳಬೇಕು. ನೀರಿನಲ್ಲಿ ತೊಳೆಯಬೇಕು. ದಪ್ಪವರ್ಣದಿಂದ ತೆಳುವರ್ಣದ ಕಡೆಗೆ ಬಣ್ಣವನ್ನು ಲೇಪಿಸುತ್ತಾ ಹೋಗಬೇಕು, ಕ್ಲಿಯರ್ ಟ್ಯಾಚೂಡ್ ಅನ್ನು ಬಳಸಬೇಕು. ಈ ರೀತಿ ಲೇಪನ ಮಾಡುವುದರಿಂದ ಹೆಚ್ಚು ಕಾಲ ಬಾಳಿಕೆ ಬರುತ್ತದೆ. ಮತ್ತು ಒಳಪು ಕೂಡಾ ಇರುತ್ತದೆ. ಆರ್ಡನರ್ ಎಂಬ ದ್ರವವನ್ನು ಲೇಪಿಸಿ ಇದರಲ್ಲಿ ಅಂಟಿನಾಂಶವು ಹೆಚ್ಚಾಗಿದ್ದು, ಲೇಪಿಸಿದ ಬಣ್ಣವು ಇದ್ದಕ್ಕಿದ್ದಂತೆಯೇ ಉಳಿಯುತ್ತದೆ.

ಗಾಜಿನ ಮೇಲೆ ನಮಗೆ ಮೈವಳಿಕೆ ಬೇಕಾದ ಸಂದರ್ಭದಲ್ಲಿ ಗಾಜಿನ ಮೇಲೆ ವ್ಯಾಕ್ಸ್ (ಬಾರ್‌ಡಾರ್‌ಗೆ ಬಳಸುವಂತಹ ವಸ್ತು)ನ್ನು ಇಂಚಿನಷ್ಟು ೧/೨ ಎತ್ತರ ಮಾಡಿಕೊಂಡು ೧ ಜಗ್ ಆ್ಯಸಿಡ್‌ಗೆ ೨ ಜಗ್ ನೀರನ್ನು ಹಾಕಿ ಮಿಶ್ರಣ ಮಾಡಬೇಕು. ನಂತರದಲ್ಲಿ ಗಾಜಿನ ಮೇಲೆ ಸುರಿಯಬೇಕು. ೩೦ ನಿಮಿಷಗಳಾದ ಮೇಲೆ ಕಟರ್ ಅಥವಾ ಕಡ್ಡಿಯಿಂದ ಅದನ್ನು ಪರೀಕ್ಷೆ ಮಾಡಬೇಕು. ಮಾಡಿದಾಗ ಮೈವಳಿಕೆಯನ್ನು ಹೊಂದಿದೆಯೇ ಅಥವಾ ಇಲ್ಲವೊ ಎಂಬುವುದು ತಿಳಿಯುತ್ತದೆ. ಮೈವಳಿಕೆಯು ಮೂಡಿದ ನಂತರ ಗಾಜಿನ ಮೇಲಿರುವಂತಹ ಆ್ಯಸಿಡನ್ನು ಒಂದು ಡಬ್ಬಿಯೊಳಗೆ ಹಾಕಿಕೊಂಡು ನಂತರದಲ್ಲಿ ಪಾಲಿಶ್‌ಮಾಡಬೇಕು. ಬ್ಲಾಕ್ ಟು ಬ್ಲಾಕ್ ಅಥವಾ ನೀಲಿಪೇಸ್ಟ್ ಮಾಡಿಕೊಂಡು ಸೂರ್ಯಕಿರಣಗಳು ಬೀಳುವಂತೆ ಇಲ್ಲವೇ ಟ್ಯೂಬ್ ಲೈಟ್‌ನಿಂದ ಅದಕ್ಕೆ ಶಾಖಕೊಟ್ಟು ಅದನ್ನು ಒಣಗಿಸುತ್ತಾರೆ. ಇದಾದ ಮೇಲೆ ಸಂಪೂರ್ಣವಾಗಿ ನೀರಿನಿಂದ ತೊಳೆಯುತ್ತಾರೆ.

ಗಾಜಿನಲ್ಲಿ ರಿಲೀಫ್ ನಂತಹ ಆಕಾರಗಳನ್ನು ಬಳಸಿಕೊಂಡು ವಿವಿಧ ವಿನ್ಯಾಸಗಳನ್ನು ಈಗಿನ ಯುವ ಕಲಾವಿದರು ಮಾಡುತ್ತಿದ್ದಾರೆ. ರಿಲೀಫ್ ವರ್ಕ್ಸ್ ಮಾಡಿದರೂ ಸಹ ಹೆಚ್ಚಾಗಿ ಇದು ಪ್ರಚಲಿತವಾಗಿ ಬೆಳೆಯಲಿಲ್ಲ. ನಿಧಾನಗತಿಯಲ್ಲಿ ಬೆಳೆಯುತ್ತಾಹೋಗುತ್ತಿದೆ. ರಿಲೀಫ್ ವರ್ಕ್ಸ್ ತಯಾರಿಸುವ ವಿಧಾನ ಮೊದಲು ಒಂದು ಗಾಜನ್ನು ತೆಗೆದುಕೊಂಡು ನಮಗೆ ಬೇಕಾದಂತಹ ಆಕಾರಗಳಂತೆ ಕತ್ತರಿಸಿ ಪಾಲಿಶ್

ಮಾಡಿಕೊಳ್ಳಬೇಕು. ನಂತರದಲ್ಲಿ ಒಂದು ಸಪೂರವಾದ ಗಾಜಿನ ಮೇಲೆ ಅದಕ್ಕೆ ಹೊಂದುವಂತೆ ಗುರುತುಗಳನ್ನು ಹಾಕಿಕೊಂಡು ಕತ್ತರಿಸಿದ ಆಕಾರವನ್ನು ಒಂದೊಂದಾಗಿಯೇ ಜೋಡಿಸಿಕೊಂಡು ಹೋಗಬೇಕು. ೩೦ ನಿಮಿಷಗಳ ಕಾಲ ಒಣಗಲಿಕ್ಕೆ ಬಿಟ್ಟು ನೀರಿನಿಂದ ಸಂಪೂರ್ಣವಾಗಿ ತೊಳೆಯಬೇಕೆಂದು ಗಾಜಿನ ಮಾಧ್ಯಮದಲ್ಲಿ ನಿಪುಣಹೊಂದಿರುವಂತಹ ಹನಮಂತ ಸಂದಿಮನಿಯವರು ಹೇಳುತ್ತಾರೆ. ಬಳಸುವ ಪರಿಕರಗಳು:- ಆ್ಯಸಿಡ್, ಬ್ಲಾಕ್, ಜಪಾನ್, ಸ್ಟೀಕರ್, ಮರಳು, ಕಲರ್ ಟೇನರ್, ಕಟರ್, ಕುಂಚ, ಸ್ಕೇಲ್, ಪೆನ್ಸಿಲ್ ಮುಂತಾದವು. ಅತಿ ಸೌಂದರ್ಯ ಮತ್ತು ಸೂಕ್ಷ್ಮದಿಂದ ಕೂಡಿದ ಗಾಜಿನ ಭಿತ್ತಿಚಿತ್ರವು ಸಹೃದಯನಿಗೆ ಬಹುಬೇಗನೆ ಹತ್ತಿರವಾಗಿಬಿಡುತ್ತದೆ. ಜೊತೆಗೆ ಇಂದಿನ ದಿನಮಾನಗಳಲ್ಲಿ ಗಾಜಿನ ಭಿತ್ತಿಚಿತ್ರವು ಅತಿ ಪ್ರಸಿದ್ಧವಾಗಿದ್ದು. ಕಲಾವಿದರಿಂಗ ಆರ್ಥಿಕ ಅಭಾವವನ್ನು ನೀಗಿಸುವಂತ ಕಲೆಯಾಗಿದೆ. ಪ್ರಸ್ತುತವಾಗಿ ಈ ಗಾಜಿನ ಭಿತ್ತಿಚಿತ್ರಕಲೆಯು ಅತಿವೇಗವಾಗಿ ಬೆಳೆಯುತ್ತಿರುವುದರಿಂದ ಹೆಚ್ಚು ಜನರು ಇಷ್ಟಪಡುತ್ತಾರೆ. ಇದು ಒಂದು ಉತ್ತಮ ಕಲಾಮಾಧ್ಯವಾಗಿ ಹೊರಹೊಮ್ಮುತ್ತಿದೆ.

* * *

ಅಧ್ಯಾಯ - ಐದು

# ಮಣ್ಣು ಮತ್ತು ಸಿಮೆಂಟ್ ಮಾಧ್ಯಮದ ಭಿತ್ತಿಶಿಲ್ಪ

ಮಾನವನು ಬದುಕನ್ನು ರೂಪಿಸಿಕೊಳ್ಳುವಲ್ಲಿ ಮಣ್ಣಿನ ಪಾತ್ರ ಪ್ರಮುಖವಾಗಿದೆ. ಮಣ್ಣಿನಲ್ಲೆ ಹುಟ್ಟಿ, ಬೆಳೆದು, ಸಾಯುವುದು, ಸಹಜವಾದ ಮಾತಾಗಿದೆ. ಹಿಂದಿನ ಕಾಲದಿಂದಲೂ ನಡೆದುಕೊಂಡು ಬಂದಿರುವುದು ಮಣ್ಣನ್ನು ಪೂಜೆಮಾಡುವುದು.

"ಮಣ್ಣನ್ನು ನಂಬಿ ಮಣ್ಣಿನಿಂದ ಬದುಕಿನ

ಮಣ್ಣಿನೆಗೆ ಮುಂದೆ ಹೊನ್ನು ಅಣ್ಣಯ್ಯ

ಮಣ್ಣೀ ಲೋಕದಲ್ಲಿ ಬೆಳೆಯಾದ್ದು"

ಹೀಗೆ ಪ್ರಾಚೀನರು ನಮ್ಮ ನಾಡಲ್ಲಿ ಮಣ್ಣಿಗೆ ಹೆಚ್ಚಿನ ಸ್ಥಾನಮಾನ ನೀಡಿದ್ದಾರೆ. ದೇ.ಜ.ಗೌ.ಹೇಳುವಂತೆ ಮಣ್ಣು ಸಂಪತ್ತನ್ನು ಹೇರುವ ಜೀವಶಕ್ತಿ ಮಣ್ಣು ಹೊನುಗಳೆರಡೂ ರೈತನ ಪಾಲಿಗೆ ಅಬೇಧ ವಸ್ತುಗಳು ದುಡಿಯುವ ಬಾಯಿಗೆ ಮಣ್ಣೇ ಹೊನ್ನಾಗಿ ಪರಿಣಮಿಸುತ್ತದೆ. ಈ ಮಾತು ಮಣ್ಣಿನ ಮಹತ್ವವನ್ನು ತಿಳಿಸುತ್ತದೆ.

ಮಡಕೆಯ ಮಾಡುವರ ಮಣ್ಣೇ ಮೊದಲು ಎಂಬ ಮಾತಿನಂತೆ ಮನುಷ್ಯನಿಗೆ ಸೌಂದರ್ಯ ಪ್ರಜ್ಞೆ ಉಂಟಾಗಿ ತೊಡಗಿಸಲು ಮಣ್ಣು ಮೊದಲ ಮಾಧ್ಯಮವಾಗಿ ಬಳಕೆಯಾಗಿರಲು ಇದು ಉಪಯುಕ್ತವಾಗಿದೆ. ಹರಪ್ಪ ಮತ್ತು ಮಹೆಂಜೋದಾರೋಗಳ ಉತ್ಖನನದಲ್ಲಿ ದೊರೆತ ಕಲಾತ್ಮಕ ಪಾತ್ರೆಗಳು ಮಕ್ಕಳಾಟಿಕೆಗಳು ಮುಂತಾದ ಮಣ್ಣಿನ ಶಿಲ್ಪಗಳ ರಚನೆಯು ಪ್ರಾಚೀನತೆಯನ್ನು ನೆನಪಿಸುತ್ತದೆ.[೧] ಆಧುನಿಕ ಕಾಲದಲ್ಲಿ ಮಣ್ಣಿನ ಮಾಧ್ಯಮವು ಭಿತ್ತಿಶಿಲ್ಪಕಲೆಗೆ ತುಂಬಾ ಪ್ರಸಿದ್ಧವಾದಂತೆ ಭಿತ್ತಿ ಕಲೆಯನಂತರ ಅತ್ಯಂತ ಹೆಸರುವಾಸಿಯಾಗಿ ಬೆಳೆದ ಮಾಧ್ಯಮವೆಂದರೆ ಅನೇಕ ಕಲಾವಿದರು ನಾನಾ ರೀತಿಯ ಪ್ರಯೋಗಗಳನ್ನು ಮಾಡುವ ಮೂಲಕವಾಗಿ

೧. ಶಿವಾನಂದ ಬಂಟನೂರು : ಉತ್ತರ ಕರ್ನಾಟಕದ ಜನಪದ ಶಿಲ್ಪಕಲೆ, ಅಪ್ರಕಟಿತ ಪಿಹೆಚ್.ಡಿ ಮಹಾಪ್ರಬಂಧ, ಕ.ವಿ.ವಿ., ಹಂಪಿ, ಪುಟ-೪೦ ಮತ್ತು ೪೧

ಭಿತ್ತಿಶಿಲ್ಪಗಳನ್ನು ರಚಿಸುತ್ತಿದುದ್ದನ್ನು ಕಾಣಬಹುದು. ಮೊದಲ ಶಿಲ್ಪಗಳನ್ನು ರಚಿಸುತ್ತಿದ್ದ ಕಲಾವಿದರುಗಳು ಕ್ರಮೇಣವಾಗಿ ಉಬ್ಬುಶಿಲ್ಪಗಳನ್ನು ರಚಿಸಿಕೊಳ್ಳುತ್ತಾ ಬಂದಿದ್ದಾರೆ. ಈ ಮಣ್ಣಿನ ಮಾಧ್ಯಮವನ್ನು ಇನ್ನುಳಿದ ಕೆಲವು ಮಾಧ್ಯಮಗಳಲ್ಲೂ ಇದು ಪ್ರಮುಖ ಪಾತ್ರ ವಹಿಸುತ್ತದೆ. ಕಾಲಕಳೆದಂತೆಲ್ಲಾ ಆಧುನಿಕ ಯುವ ಕಲಾವಿದರುಗಳು ಮಣ್ಣಿನ ಮಾಧ್ಯಮದಲ್ಲಿ ಭಿತ್ತಿಶಿಲ್ಪಗಳನ್ನು ಮಾಡಲು ಮುಂದಾದರು. ಇದರಲ್ಲಿ ನಾನಾ ಪ್ರಯೋಗಗಳನ್ನು ಮಾಡುವ ಮೂಲಕ ಕಲಾವಿದನ ಮನಸ್ಸಿನ ಭಾವನೆ ಮಣ್ಣಿನಲ್ಲಿ ಹೊಸದಾದ ಸಂಯೋಜನೆಗಳನ್ನು ಮಾಡುತ್ತಾ ಭಿನ್ನ-ವಿಭಿನ್ನವಾಗಿ ಕಲಾಕೃತಿಗಳನ್ನು ರಚನೆ ಮಾಡುತ್ತಿರುವುದನ್ನು ಕಾಣಬಹುದು.

**ನಿಸರ್ಗದಲ್ಲಿ ಗಣಪತಿ**

ಈ ಭಿತ್ತಿಶಿಲ್ಪವನ್ನು ದಾನಯ್ಯ ಚೌಕಿಮಠ ಎಂಬುವವರು ೨x೪ ಅಡಿ ಅಳತೆಯನ್ನು ಹೊಂದಿದ್ದು. ಶಿಲ್ಪ ಮತ್ತು ವರ್ಣಚಿತ್ರ ಕಲಾ ವಿಭಾಗ ೨೦೦೯ರಲ್ಲಿ ಬನಶಂಕರಿಯಲ್ಲಿ ಕಾಣಬಹುದು.

ಈ ಭಿತ್ತಿಶಿಲ್ಪದಲ್ಲಿ ಗಣಪತಿಯ ನಿಸರ್ಗದಲ್ಲಿರುವ ಸನ್ನಿವೇಶವನ್ನು ಕಾಣಬಹುದು. ಕೆಳಭಾಗದಲ್ಲಿ ನೀರಿನ ಅಲೆಗಳು ಮತ್ತು ಮರ ಆಕಾಶದಿಂದ ಕೂಡಿದಂತಹ ಸಂಯೋಜನೆಯನ್ನು ಕಾಣಬಹುದು, ಇದು ಮಣ್ಣಿನಿಂದ ಮಾಡಿದಂತಹ ಭಿತ್ತಿಶಿಲ್ಪವಾಗಿದೆ.

**ಗಣಪತಿ**

ಈ ಭಿತ್ತಿಶಿಲ್ಪವನ್ನು ದಾನಯ್ಯ ಚೌಕಮಠ ಎಂಬುವವರು ೨x೨ ಅಡಿ ಅಳತೆಯನ್ನು ಹೊಂದಿದ್ದು, ೨೦೦೯ರಲ್ಲಿ ಬನಶಂಕರಿಯ ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗದಲ್ಲಿ ಕಾಣಬಹುದು.

ಈ ಗಣಪತಿಯು ಮಣ್ಣಿನ ಮಾಧ್ಯಮದಿಂದ ಕೂಡಿದ್ದು, ವೃತ್ತಾಕಾರವಾಗಿ ರಚನೆಯಾಗಿ ಸುಂದರವಾಗಿ ಇರುವುದನ್ನು ಕಾಣುತ್ತೇವೆ. ಗಣಪತಿಯ ಸೊಂಡಿಲು ಸುಂದರವಾಗಿ ರಚಿಸಿದ್ದು, ಬಲಗೈಯಲ್ಲಿ ಆರ್ಶಿವಾದಿಸುವಂತೆ ಹಿಡಿದಿದ್ದು. ಎಡಗೈಯಲ್ಲಿ ಉಂಡೆಯ ತಟ್ಟೆಯನ್ನು ಹಿಡಿದಿದ್ದನ್ನು ಸುಂದರವಾಗಿ ರಚಿಸಿದ್ದಾರೆ.

**ಅಮೂರ್ತ ಸ್ವರೂಪ**

ಭಿತ್ತಿಶಿಲ್ಪವನ್ನು ೨೦೦೮ರಲ್ಲಿ ರಚಿಸಿದರು. ೧೫x೨೦ ಅಡಿಯಷ್ಟು ಅಳತೆಯನ್ನು ಹೊಂದಿದ್ದು. ಬೆಂಗಳೂರಿನ ಬ್ಯಾಂಕ್ ಕಾಲೋನಿಯ ಒಂದು ಸ್ಟೂಡಿಯೋದ ಭಿತ್ತಿ ಮೇಲೆ ಎಂ.ಎಸ್.ಮೂರ್ತಿಯವರು ರಚಿಸಿದ್ದಾರೆ.

ಈ ಭಿತ್ತಿಶಿಲ್ಪವು ಅಮೂರ್ತವಾಗಿದ್ದರೂ ಸಹ ಅದರ ಒಂದು ಸ್ವರೂಪ ಕಾಣಿಸುತ್ತದೆ. ಮೇಲೆ ವೃತ್ತಾಕಾರವಾಗಿ ರಚಿಸಿರುವ ಶಿಲ್ಪದಲ್ಲಿ ಮಾನವನ ಮುಖದ ಆಕಾರ ಗೋಚರಿಸುತ್ತದೆ. ಇಲ್ಲಿ ಎರಡು ಕಣ್ಣುಗಳನ್ನು ಅರ್ಧವೃತ್ತಾಕಾರವಾಗಿ ಬಳಸಿಕೊಂಡು ಹಣೆಯ ಭಾಗಕ್ಕೆ ನಾಮ ಮತ್ತು ವೃತ್ತಾಕಾರವಾದ ಬೊಟ್ಟನ್ನು ಅಥವಾ ಕುಂಕುಮ ಕಾಣುತ್ತೇವೆ. ಅದರಲ್ಲೂ ಸಹ ವಿವಿಧ ರೀತಿಯಲ್ಲಿ ವಿನ್ಯಾಸ ಮಾಡಿದ್ದಾರೆ.

ವಿ.ಆಕಾರವನ್ನು ಹೋಲುವ ಮೂಗು ಅಲೆಗಳ ಆಕಾರ ಹೋಲುವ ಬಾಯಿ ಮತ್ತು ಮೀಸೆ ಎದೆಯ ಆಕಾರ ಮತ್ತು ಭುಜಗಳ ಆಕಾರಗಳನ್ನು ನಾವು ಕಾಣಬಹುದು. ಒಟ್ಟಾರೆ ಗಮನಿಸಿದಾಗ ಸಂಯೋಜನೆಯು ಮುಖ್ಯ ಪಾತ್ರ ವಹಿಸುತ್ತದೆ.

**ಜನಪದ ಸಂಪ್ರದಾಯ ಶೈಲಿ-೧**

ಭಿತ್ತಿಶಿಲ್ಪವನ್ನು ಶ್ರೀಕೃಷ್ಣಭಟ್‌ರವರು ರಚಿಸಿದ್ದು, ೧೫x೨೦ ಅಡಿಗಳಷ್ಟು ವಿಸ್ತಾರವಾಗಿರುವ ಈ ಭಿತ್ತಿಯ ತಿಮ್ಮಪ್ಪ ಭಂಡಾರಿ ಸಮುದಾಯ ಭವನ ವಿಜಯನಗರ ಬೆಂಗಳೂರಿನಲ್ಲಿ ಕಾಣಬಹುದು.

ಈ ಭಿತ್ತಿಶಿಲ್ಪವು ಜನಪದ ಸಂಪ್ರದಾಯವನ್ನು ನೆನಪಿಸುತ್ತದೆ. ಮೇಲಿನ ಭಾಗದಲ್ಲಿ ಉತ್ತರ ಕರ್ನಾಟಕದ ನಾಟಕದ ಮುಖವಾಡಗಳನ್ನು ನೆನಪಿಸುತ್ತದೆ. ಇಲ್ಲಿ ಸಮುದ್ರದ ದಡೆಯಲ್ಲಿ ಮರಗಿಡಗಳು ಹೇರಳವಾಗಿ ಬೆಳೆದಿದ್ದು, ನೀರಿನ ಅಲೆಗಳನ್ನು ಮತ್ತು ವಿವಿಧ ಭಂಗಿಯಲ್ಲಿರುವಂತಹ ಮೀನಿನ ಆಕೃತಿಗಳನ್ನು ಕಾಣುತ್ತೇವೆ. ಭಿತ್ತಿಯ ಎಡಭಾಗದಲ್ಲಿ ಬಾಗಿಲನ್ನು ಹೋಲುವ ಅದರ ಮೇಲೆ ವಿವಿಧ ವಿನ್ಯಾಸದಿಂದ ರಚಿಸಿದಂತಹವನ್ನು ಕಾಣಬಹುದು. ಅದರ ಕೆಳಗೆ ಎತ್ತಿನ ಮುಖವಾಡ ಮತ್ತು ಹಾರುತ್ತಿರುವ ಪಕ್ಷಿಗಳನ್ನು ಅತಿ ಸುಂದರವಾಗಿ ರಚಿಸಿದ್ದಾರೆ. ಬಿಂಬಿಸಿ ಯಕ್ಷಗಾನಕ್ಕೆ ಸಂಬಂಧಿಸಿದಂತೆ ವಿವಿಧ ಮಾದರಿಯ ವಿನ್ಯಾಸಗಳನ್ನು ಇಲ್ಲಿ ಕಾಣಬಹುದಾಗಿದೆ. ವಿವಿಧ ಗಿಡಗಳ ಎಲೆಗಳನ್ನು ಇಲ್ಲಿ ರಚಿಸಿದ್ದು, ಮೇಲೆ ಹೊದಂತೆಲ್ಲಾ ಇಬ್ಬರು ಯುವತಿಯರು ಇರುವುದನ್ನು ಕಾಣುತ್ತೇವೆ. ಒಬ್ಬರು ಛಾಮರವನ್ನು ಹಿಡಿದಿದ್ದು ತನ್ನ ಕೊರಳಿಗೆ ಅನೇಕ ಸರಗಳನ್ನು ಬಳಸಿದ್ದಾರೆ. ಇನ್ನೊಬ್ಬರು ಡಮರುವನ್ನು ಹೊಡೆಯುತ್ತಿರುವ ದೃಶ್ಯವನ್ನು ಕಾಣುತ್ತೇವೆ. ಅದರ ಮೇಲ್ಭಾಗದಲ್ಲಿ ಬೋಟಿನ ವಿನ್ಯಾಸವನ್ನು ಕಾಣುತ್ತೇವೆ ಬೋಟಿನ ಅಲೆಗಳನ್ನು ಸಹ ಕಾಣುತ್ತೇವೆ. ಒಟ್ಟಾರೆಯಾಗಿ ಈ ಭಿತ್ತಿಶಿಲ್ಪವು ಒಂದು ರಾಜ್ಯದ ಸಂಸ್ಕೃತಿಯನ್ನು ಬಿಂಬಿಸುತ್ತದೆ.

**ಜನಪದ ಸಂಪ್ರದಾಯ ಶೈಲಿ-೨**

ಭಿತ್ತಿಶಿಲ್ಪವನ್ನು ಶ್ರೀಕೃಷ್ಣಭಟ್‌ರವರು ರಚಿಸಿದ್ದು, ೧೫x೨೦ ಅಡಿಯ ಅಳತೆಯನ್ನು ಹೊಂದಿದೆ. ಈ ಭಿತ್ತಿಯ ತಿಮ್ಮಪ್ಪ ಭಂಡಾರಿ ಸಮುದಾಯ ಭವನ ವಿಜಯನಗರ ಬೆಂಗಳೂರಿನಲ್ಲಿ ಕಾಣಬಹುದು.

ಈ ಭಿತ್ತಿಶಿಲ್ಪವು ಒಂದು ಪ್ರದೇಶದ ಜನಪದ ಸಂಪ್ರದಾಯವನ್ನು ಬಿಂಬಿಸುತ್ತದೆ. ಇಲ್ಲಿ ಮಾವಿನ ತೋರಣವನ್ನು ಹಾಕಿರುವುದು ಮತ್ತು ಕ್ರಿಸ್‌ಮಸ್ ಟ್ರೀಯನ್ನು ರಚಿಸಿದ್ದು, ಎಡಭಾಗದಲ್ಲಿ ಕೊಡಗಳು ಮತ್ತು ಆ ಪ್ರದೇಶದ ಹಸಿರಾಗಿರುವುದರಿಂದ ಇಲ್ಲಿ ಎಲೆಗಳನ್ನು ರಚಿಸಿದ್ದು, ಆ ಭಾಗದಲ್ಲಿ ರಚನೆಯಾದ ಮನೆಗಳ ಆಕಾರಗಳು ರೈಲ್ವೆದಾರಿಯನ್ನು ಸಹ ಇಲ್ಲಿ ಕಾಣಬಹುದಾಗಿದೆ. ಅದರ ಮೇಲೆ ಗಣಪತಿ ಮೂರ್ತಿಯನ್ನು ಚಿಕ್ಕದಾಗಿ ಮಾಡಿರುವ ಮತ್ತು ಯಕ್ಷಗಾನದ ವಿವಿಧ ಮುಖಗಳನ್ನು ಇಲ್ಲಿ ರಚನೆಯಾಗಿರುವುದನ್ನು ಕಾಣುತ್ತೇವೆ. ಅವರ ವೇಶಭೂಷಣಗಳಿಗೆ ಸಂಬಂಧಿಸಿಂತೆ ರಚನೆಯಾಗಿರುವುದನ್ನು ಕಾಣಬಹುದಾಗಿದೆ. ಆ ಪ್ರದೇಶದಲ್ಲಿ ಇರುವಂತಹ ಸಮುದ್ರದ ತೀರದಲ್ಲಿ ತೆಂಗಿನ ಮರಗಳನ್ನು ಬೆಳೆಸಿರುವುದರಿಂದ ಸೊಗಸಾಗಿ



ಜನಪದ ಸಂಪ್ರದಾಯ ಶೈಲಿ–೨



ಕರ್ನಾಟಕದ ಸಂಸ್ಕೃತಿ

ಕಾಣಿಸುತ್ತದೆ. ಇಲ್ಲಿ ಮರಗಳು ಹೆಚ್ಚಾಗಿ ಕಂಡುಬರುವುದರಿಂದ ಈ ಭಿತ್ತಿಶಿಲ್ಪದಲ್ಲಿ ಹೆಚ್ಚಾಗಿ ಗಿಡ ಮರಗಳನ್ನು ಚಿತ್ರಿಸಿದ್ದು, ಯಕ್ಷಗಾನ ಕಿರೀಟದ ಅರ್ಧಭಾಗವನ್ನು ಮತ್ತು ಸೂರ್ಯನ ಅರ್ಧಭಾಗವನ್ನು ರಚಿಸಿದ್ದಾರೆ. ಒಟ್ಟಾರೆಯಾಗಿ ಸಂಯೋಜನೆಯು ತುಂಬಾ ಅಂದವಾಗಿ ಕಾಣುತ್ತದೆ.

**ಕರ್ನಾಟಕ ಸಂಸ್ಕೃತಿ**

ಭಿತ್ತಿಶಿಲ್ಪವನ್ನು ಬೆಂಗಳೂರಿನ ಶಿಲ್ಪಕಲಾ ಅಕಾಡೆಮಿಯ ಭಿತ್ತಿಯ ಗೋಡೆಯ ಮೇಲೆ ರಚಿರುವುದನ್ನು ಕಾಣಬಹುದು, ಇದು ೧೫x೨೫ ಅಡಿಯ ಅಳತೆಯನ್ನು ಹೊಂದಿದೆ.

ಈ ಭಿತ್ತಿಶಿಲ್ಪದಲ್ಲಿ ನರ್ತಕಿ ಹಂಪಿಯ ಕಲ್ಲಿನ ರಥ ಬುದ್ಧ ಮತ್ತು ಗಣಪತಿಯನ್ನು ಕಾಣಬಹುದು. ಇಲ್ಲಿ ನಮ್ಮ ಕನ್ನಡ ನಾಡಿನ ಎಲ್ಲಾ ಸಂಸ್ಕೃತಿಯನ್ನು ಈ ಭಿತ್ತಿ ಶಿಲ್ಪದಲ್ಲಿ ತೋರಿಸಿದ್ದಾರೆ. ಹಾಗೆ ಮಧ್ಯಭಾಗದಲ್ಲಿರುವ ಗಣೇಶನನ್ನು ಸುಂದರವಾಗಿ ನಿರ್ಮಿಸಿ ಕಿರೀಟವನ್ನು ವಿವಿಧ ವಿನ್ಯಾಸಗಳಿಂದ ರಚಿಸಿರುವುದು ಕಾಣಬಹುದಾಗಿದೆ. ಎಡಭಾಗದಲ್ಲಿ ಕಂಡುಬರುವ ನರ್ತಕಿಯು ತನ್ನ ತಲೆಯ ಹಿಂಬದಿಯಲ್ಲಿ ಕೂದುಲಿಗೆ ಕಟ್ಟಿಕೊಂಡ ತುರಬನ್ನು ಕಾಣಬಹುದು ಮತ್ತು ಕೊರಳಿಗೆ ಸರವನ್ನು ಹಾಕಿಕೊಂಡಿದ್ದು. ಎಡಭಾಗದಲ್ಲಿ ವಿನ್ಯಾಸವನ್ನು ಕಾಣಬಹುದಾಗಿದೆ. ಬುದ್ಧನು ಶಾಂತಿಯುತವಾಗಿ ತನ್ನ ಕಣ್ಣುಗಳನ್ನು ಮುಚ್ಚಿಕೊಂಡು ನಿಂತಿರುವ ಹಾಗೆ ರಚಿಸಿದ್ದಾರೆ. ಒಟ್ಟಾರೆಯಾಗಿ ಕರ್ನಾಟಕದ ಸಂಸ್ಕೃತಿಯನ್ನು ಎತ್ತಿ ತೋರಿಸುತ್ತದೆ.

**ಪರಿಸರ**

ಈ ಭಿತ್ತಿಶಿಲ್ಪವನ್ನು ಗುಲಬರ್ಗಾದ ದಿ ಐಡಿಯಲ್ ಫೈನ್ ಆರ್ಟ್ ಕಾಲೇಜಿನ ಭಿತ್ತಿಯ ಮೇಲೆ ಟೆರ್‍ರಾಕೋಟಾದಿಂದ ವೀರೇಂದ್ರ ಷಾ ರವರು ರಚಿಸಿದ್ದಾರೆ.

ಭಿತ್ತಿಶಿಲ್ಪದಲ್ಲಿ ನಿಂತಿರುವಂತಹ ಆಕಳಂತೆ ರಚಿಸಿದರು. ವಿವಿಧ ಬಗೆಯ ಟೆರ್‍ರಾಕೋಟಾದ ಪೀಸುಗಳನ್ನು ಜೋಡಿಸಿ ತಯಾರಿಸಿದ್ದಾಗಿದೆ. ಇದರ ಬಲಭಾಗದಲ್ಲಿ ಮರದ ಆಕಾರವಾಗಿ ಜೋಡಿಸಿ ಎಲೆಗಳನ್ನು ರಚಿಸಿದ್ದಾರೆ. ಮರದಿಂದ ಒಂದು ಪಕ್ಷಿಯು ಹಾರಿಕೊಂಡು ಬರುತ್ತಿರುವುದನ್ನು ಕಾಣುತ್ತೇವೆ. ಮರದಿಂದ ಕೆಲವು ಎಲೆಗಳು ಉದುರುವುದನ್ನು ನೋಡುತ್ತೇವೆ. ಆಕಾಶದಲ್ಲಿ ಮೋಡಗಳು ರಚನೆಯಾದಂತೆ ರಚಿಸಿದ್ದಾರೆ. ಆಕಳಿನ ಮುಂದೆ ಹುಲ್ಲಿನ ಆಕಾರವಾಗಿ ಇರುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಈ ಟೆರ್‍ರಾಕೋಟಾದಲ್ಲಿ ರಚನೆಯಾದಂತಹ ಭಿತ್ತಿಶಿಲ್ಪವು ಆ ಕಟ್ಟಡದ ಸುಂದರವಾಗಿ ಕಾಣಲು ಈ ಭಿತ್ತಿ ಮಾಧ್ಯಮವು ಪ್ರಮುಖ ಪಾತ್ರವಾಗಿದೆ.

**ದುರ್ಗಮುರ್ಗಿ**

ಭಿತ್ತಿಶಿಲ್ಪವನ್ನು ಸರಕಾರಿ ಚಿತ್ರಕಲಾ ಮಹಾವಿದ್ಯಾಲಯ ಧಾರವಾಡದ ಪ್ರದರ್ಶನಾಲಯದಲ್ಲಿ ಸಂಗ್ರಹಗೊಂಡಿದ್ದು, ಬಹುರೂಪಿಯವರು ೨೦೧೧ರ ಧಾರವಾಡ ಉತ್ಸವ ಸಂದರ್ಭದಲ್ಲಿ ರಚಿಸಿದ್ದು, ೪x೬ ಅಳತೆಯನ್ನು ಹೊಂದಿದೆ.

ಈ ಭಿತ್ತಿಶಿಲ್ಪದಲ್ಲಿ ದುರ್ಗಮುರ್ಗಿಯರಿಗೆ ಸಂಬಂಧಿಸಿದಂತೆ ಚಿತ್ರವನ್ನು ಇಲ್ಲಿ ನೋಡುತ್ತೇವೆ. ಇಲ್ಲಿ ಒಬ್ಬ ಹೆಂಗಸು ತನ್ನ ತಲೆಯ ಮೇಲೆ ಮುರ್ಗಿಯ ದೇವರನ್ನು ಎತ್ತಿ ಕೊಂಡು ತನ್ನ ಎರಡು ಕೈ ಗಳಿಂದ ಹಿಡಿದಿರುವುದನ್ನು ನೋಡುತ್ತೇವೆ. ಮುಖವನ್ನು ಅತಿ ಸುಂದರವಾಗಿ ರಚಿಸಿದ್ದು, ಹಣೆಯ ಮೇಲೆ ವೃತ್ತಾಕಾರವಾಗಿ ರಚಿಸಿದ್ದು ಕೈಗಳ ಮೇಲೆ ವಿವಿಧ ರೀತಿಯ ಆಕಾರಗಳನ್ನು ಬಳಸಿಕೊಂಡು ಮಣ್ಣಿನಿಂದ ತಯಾರಿಸಿದ್ದಾರೆ. ಅದರ ಪಕ್ಕದಲ್ಲಿ ಒಬ್ಬ ನೃತ್ಯವನ್ನು ಮಾಡುತ್ತಿರುವುದನ್ನು ಕಾಣುತ್ತೇವೆ. ಅವನ್ನು ತಲೆಗೆ ಕಿರೀಟವನ್ನು ಸುತ್ತಿದ್ದು, ಕೈಯಲ್ಲಿ ಕತ್ತಿಯನ್ನು ಹಿಡಿದು ಎಡಗೈಯಲ್ಲಿ ಚಾಮರವನ್ನು ಹಿಡಿದು ನೃತ್ಯವನ್ನು ಮಾಡುತ್ತಿದ್ದಾರೆ. ಇಲ್ಲಿ ಸಂಯೋಜನೆಯನ್ನು ಮಾಡಲಾಗಿದೆ.

### ಜನಪದ ಶೈಲಿ

ಭಿತ್ತಿಶಿಲ್ಪವನ್ನು ಜೈಪುರದಿಂದ ತಂದು ಗುಲ್ಬರ್ಗಾದ ಅಮೃತ ಸಾಹು ಮನೆಯ ಗೋಡೆಯ ಮೇಲೆ ಹಚ್ಚಿರುವುದನ್ನು ತೋರುತ್ತದೆ. ಇದು ೪x೮ ಅಡಿ ಅಳತೆಯನ್ನು ಹೊಂದಿದ್ದು, ಟೆರ್ರಾಕೋಟಾ ಮಧ್ಯದಲ್ಲಿ ರಚಿಸಿದ್ದಾರೆ.

ಈ ಭಿತ್ತಿಶಿಲ್ಪದಲ್ಲಿ ಜನಪದ ಶೈಲಿಗೆ ಹೋಲುವಂತೆ ಹೆಚ್ಚಾಗಿ ಹಳ್ಳಿಗೆ ಸಂಬಂಧಿಸಿದ ಭಿತ್ತಿಶಿಲ್ಪವನ್ನು ರಚಿಸುವುದನ್ನು ಕಾಣುತ್ತೇವೆ. ಇಲ್ಲಿ ೧/೨ x ೧/೨ ಅಡಿಯ ಅಳತೆಯನ್ನು ಹೊಂದಿದ್ದು, ಇಂತಹ ಬೇರೆ ಬೇರೆಯಾಗಿರುವ ತಟ್ಟೆಗಳನ್ನು ಒಂದರ ಮೇಲೊಂದರಂತೆ ಜೋಡಸಿಕೊಂಡು ಹೋಗಿರುವುದನ್ನು ಕಾಣುತ್ತೇವೆ. ಹಳ್ಳಿಯ ಜನರು ವಿವಿಧ ಕೆಲಸಗಳಲ್ಲಿ ನಿರತರಾಗಿರುವುದನ್ನು ಕಾಣುತ್ತೇವೆ. ಗಿಡ, ನವಿಲು, ಕುರಿ ಮೇಯಿಸುವವರು, ನೇಗಿಲು ತೆಗೆದುಕೊಂಡು ಹೋಗುತ್ತಿರುವುದು, ಕಟ್ಟಿಗೆ ತೆಗೆದುಕೊಂಡು ಹೋಗುತ್ತಿರುವ ದೃಶ್ಯವನ್ನು ಕಾಣಬಹುದಾಗಿದೆ.

### ಪ್ರಕೃತಿ ದೇವತೆ

ಭಿತ್ತಿಶಿಲ್ಪವನ್ನು ಬಿ.ಕೆ.ಎಸ್.ವರ್ಮಾ ಅವರು ಟೆರ್ರಾಕೋಟಾ ಮಾಧ್ಯಮದಿಂದ ಬೆಂಗಳೂರಿನ ಒಂದು ಕಟ್ಟಡದ ಮೇಲೆ ರಚಿಸಿದ್ದಾರೆ. ಈ ಭಿತ್ತಿಶಿಲ್ಪದಲ್ಲಿ ಒಬ್ಬ ಸ್ತ್ರೀಯು ಭೂಮಿಯ ಮೇಲೆ ಕುಳಿತ್ತಿದ್ದು, ತಲೆಯ ಭಾಗವನ್ನು ಎಲೆಗಳಿಂದ ಶೃಂಗರಿಸಿ ಕೈಯಿನ ಬೆರಳಿನಲ್ಲಿ ಮರದ ರೆಂಬೆಗಳಂತೆ ರಚಿಸಿ ಅದಕ್ಕೆ ಎಲೆಗಳನ್ನು ಮಾಡಿರುವುದನ್ನು ಕಾಣುತ್ತೇವೆ. ಇಲ್ಲಿ ಉದ್ದನೆಯ ಕೂದಲಿಗೆ ಎಲೆಗಳ ಆಕಾರವನ್ನು ನೀಡಿದ್ದು ಕಂಡುಬರುತ್ತದೆ. ಮುಖದಲ್ಲಿ ನಗುವಿನಾಂಶ ಹೆಚ್ಚಾಗಿದ್ದು, ಪಕ್ಷಿಗಳು ಆ ಮರದ ಮೇಲೆ ಕುಳಿತುಕೊಳ್ಳಲಿಕ್ಕೆ ಹಾರಿಕೊಂಡು ಬರುತ್ತಿರುವುದನ್ನು ಕಾಣುತ್ತೇವೆ. ಮತ್ತೊಂದು ಕಡೆಯಲ್ಲಿ ನೋಡಿದಾಗ ಒಂದು ಪಕ್ಷಿಯ ತುದಿಯಲ್ಲಿ ನಿಂತಿರುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಈ ಭಿತ್ತಿಶಿಲ್ಪವು ಸುಂದರವಾಗಿ ಕಾಣಿಸುತ್ತವೆ.

### ಮಣ್ಣಿನ ರಚನಾ ವಿಧಾನ

ಟಾರ್ರಾಕೋಟಾ ಎಂದರೆ ಮಣ್ಣಿನಲ್ಲಿ ವಿವಿಧ ಆಕಾರಗಳನ್ನು ಸುಡುವುದು ಸುಟ್ಟಂತಹ ಇಟ್ಟಿಗೆ ಅಥವಾ ಹೆಂಚನ್ನು ಪುಡಿಯಾಗಿ ಮಾಡಿಕೊಂಡ ಅದನ್ನು ಮಣ್ಣಿನ ಜೊತೆ ೧೦ ರಿಂದ ೧೫%ರಷ್ಟು ಮಿಶ್ರಣ

ಮಾಡಬೇಕು. ಅದನ್ನು ಚೆನ್ನಾಗಿ ಕಲಸಿ ಫಿಲ್ಟರ್ ಮಾಡಿಕೊಂಡು ನೀರಿನಿಂದ ಮಿಶ್ರಣ ಮಾಡಬೇಕು. ಸ್ವಲ್ಪ ಜಿಗಟಾಗಿ ಇರುವ ಹಾಗೆ ಮಿಶ್ರಣ ಮಾಡಿ ನಂತರದಲ್ಲಿ ಅದು ಕೆಂಪುಬಣ್ಣ ಬರಬೇಕಾದರೆ ಬೆಂಕಿಯನ್ನು ಉರಿಸಬೇಕು. ಕಪ್ಪುಬೇಕಾದ ಪಕ್ಷದಲ್ಲಿ ಉರಿಯನ್ನು ನಿಲ್ಲಿಸಿ ಹೊಗೆ ಬರುವಂತೆ ಮಾಡಿದರೆ ಕಪ್ಪುಬಣ್ಣ ಬರುತ್ತದೆ. ಯಾವುದೇ ಮಣ್ಣಿನ ಟೆರ್ರಾಕೋಟಾ ಶಿಲ್ಪವನ್ನು ರಚಿಸಬೇಕಾದರೆ ೧/೪ ಅಡಿ ಅಥವಾ ೬ ಎಂ.ಎಂಗಿಂತ ಹೆಚ್ಚು ದಪ್ಪವಿದ್ದು ಅದನ್ನು ಸುಟ್ಟರೆ ಹೊಡೆದು ಹೋಗುತ್ತದೆ. ಅದಕ್ಕೆ ನಿದಿಷ್ಟ ೧/೨ ಇಂಚು ಇದ್ದರೆ ಮಾತ್ರ ಇದ್ದರೆ ಚೆನ್ನಾಗಿ ಸುಡಬೇಕಾಗುತ್ತದೆ. ಭಿತ್ತಿಶಿಲ್ಪ ರಚನೆ ಮಾಡಬೇಕಾದರೆ ಮಣ್ಣಿನ ಮಾಧ್ಯದಲ್ಲಿ ಸ್ವಲ್ಪ ಸ್ವಲ್ಪ ಒತ್ತಿ ಅದರ ಆಕಾರವನ್ನು ತೆಗೆಯಬೇಕು. ಇಲ್ಲಿಯು ಕೂಡ ಹೆಚ್ಚು ದಪ್ಪವಾಗಿರಬಾರದು. ಇಲ್ಲಿ೬ ಎಂಎಂ ಅಳತೆಯಿಂದ ಕೂಡಿದ ಮಣ್ಣಿನಲ್ಲಿ ಉಬ್ಬು ತಗ್ಗುಗಳನ್ನು ಮಾಡಿಕೊಳ್ಳಬೇಕು. ರಚನೆ ಮಾಡುವಾಗ ಮೊದಲು ಸಣ್ಣ ಮಾಕೆಟ್ ಮಾಡಿಕೊಂಡು ಅದು ಯಾವ ಆಕಾರದಲ್ಲಿರುತ್ತದೆಯೂ ಅದೇ ಆಕಾರವಾಗಿ ಮಣ್ಣನ್ನು ರೋಲ್ ಮಾಡಿಕೊಂಡು ಅಚ್ಚುತ್ತಾ ಬರಬೇಕು. ಹೆಚ್ಚು ಹಗಲವಿದ್ದರೆ ಮಧ್ಯಭಾಗದಲ್ಲಿ ಕೋಟ್ ಮಾಡಿ ಫ್ಲೇಸ್ ಆಕಾರವಾಗಿ ಜೋಡಿಸಬೇಕು. ಒಳ್ಳೆಯ ತರನಾಗಿ ಜೋಡಿ ಎರಡು ಕಡೆಗಳಲ್ಲಿ ಆಕಾರ ತೆಗೆದುಕೊಂಡು ಕೆಳಗಿನ ಭಾಗವನ್ನು ಡ್ರೈ ಆಗುವುದಕ್ಕೆ ಬಿಟ್ಟರೂ ಕೂಡ ಮೇಲಿನ ಭಾಗವನ್ನು ನೆನೆಸಿದ ಬಟ್ಟೆ ಹಾಕಬೇಕು. ಎಲ್ಲಾ ಹಂತಗಳು ಮುಗಿಸಿದ ನಂತರ ಸುಡುವ ಸಂದರ್ಭದಲ್ಲಿ ಆ ಭಿತ್ತಿಶಿಲ್ಪದ ಯಾವುದೇ ಒಂದು ನಮಗೆ ಕಾಣದಂತಹ ರೀತಿಯಲ್ಲಿ ತೂತನ್ನು ತೆಗೆಯಬೇಕು ಏಕೆಂದರೆ ಒಳಗಿರುವ ಗಾಳಿಯಾಂಶವು ಹೊರ ಹೋಗುವ ನಿಟ್ಟಿನಲ್ಲಿ ಈ ರೀತಿಯಾಗಿ ಮಾಡುತ್ತಾರೆ.



ಕಿಲನ್ ಎಂದರೆ ಸುಡುವುದು ಎಂದರ್ಥ. ಇನ್‌ಡೈರೆಕ್ಟರ್ ೭೫೦ ಸೆಂಟಿಗ್ರೇಡ್ ಕಾಯಿಸಿದಾಗ ಹಿಂದೆಗಡೆ ಫ್ಲೋರ್‌ನಲ್ಲಿ ನಾವು ಮಾಡಿದಂತಹ ಟೆರ್ರಾಕೋಟಾವನ್ನು ಇಡಬೇಕು. ಅದರ ಪಕ್ಕದಲ್ಲಿ ಸಿಮಣಿ ಇದ್ದು ಇದನ್ನು ಸುಡುವಾಗ ಮೊದಲ slow fairing ಮಾಡಿಕೊಂಡು ನಂತರ ಸ್ವಲ್ಪ ಸ್ವಲ್ಪವೇ ಉರಿಯನ್ನು ಹೆಚ್ಚು ಮಾಡುತ್ತಾ ಹೊಗೆಯನ್ನು ಎಬ್ಬಿಸುತ್ತಾ ಟೆರ್ರಾಕೋಟಾದಲ್ಲಿರುವ ನೀರಿನ ಅಂಶವನ್ನು ಸ್ವಲ್ಪ ಸ್ವಲ್ಪ ತೆಗೆದ ನಂತರ ಸಂಪೂರ್ಣವಾಗಿ ಕೆಂಪು ಬಣ್ಣವಾಗುತ್ತದೆ. ನಮಗೆ ಕೆಂಪು ಬಣ್ಣ ಬೇಡವೆಂದ ಸಂದರ್ಭದಲ್ಲ ಸುಡುವಾಗ ಹೊಗೆಯನ್ನು ಹೆಚ್ಚು ಮಾಡಿದರೆ ಅದು ಕಪ್ಪಾಗಿರುವಂತೆ ಅಥವಾ ಕಪ್ಪು ಬಣ್ಣಕ್ಕೆ ತಿರುಗುತ್ತದೆ. ನಂತರದಲ್ಲಿ ಅವುಗಳನ್ನು ತೆಗೆದು ನಮಗೆ ಬೇಕಾದ ಕಡೆಗೆ ಹೋಗಿ ಫಿಕ್ಸ್ ಮಾಡಿಕೊಳ್ಳಬಹುದು. ಎಂದು ಕಲಾವಿದರಾದಂತಹ ವೆಂಕಟಚಲಪತಿಯವರು ಹೇಳುತ್ತಾರೆ. ಇದಕ್ಕೆ ಉಪಯೋಗಿಸುವ ಪರಿಕರಗಳು ಮರಳು, ಸುಟ್ಟ ಇಟ್ಟಿಗೆ ಅಥವಾ ಹೆಂಚು ಮರದ ಮಾಧ್ಯಮದಲ್ಲಿ ತಯಾರಿಸಿದ ವಿವಿಧ ರೀತಿಯ ಉಪಕರಣಗಳು.

**ಸಿಮೆಂಟ್ ಮಾಧ್ಯಮ / ಗಾರೆ ಮಾಧ್ಯಮ**

ಮಾನವನು ಮೊದಲು ಶಿಲ್ಪಗಳನ್ನು ರಚಿಸುತ್ತಿದ್ದುದು, ಗಾರೆ ಮಾಧ್ಯಮದಿಂದ ದೇವಾಲಯದ ಗೋಪುರಗಳ ಮೇಲೆ ದ್ವಾರಬಾಗಿಲಿನ ಎಡ ಬಲಗಳಲ್ಲಿ ಭಿತ್ತಿ ಶಿಲ್ಪಗಳನ್ನು ರಚನೆ ಮಾಡುತ್ತಿದ್ದರು.

ಕಾಲಕಳೆದಂತೆಲ್ಲಾ ಮಾನವನು ತನ್ನ ಕಲಾ ಚಟುವಟಿಕೆಯಲ್ಲಿ ಬೇರೆ ಬೇರೆಯ ವಸ್ತುಗಳನ್ನು ಬಳಸಿಕೊಂಡು ಉಬ್ಬು ಶಿಲ್ಪಗಳನ್ನು ಮಾಡುವುದಕ್ಕೆ ಪ್ರಾರಂಭಿಸಿದನು. ಗಾರೆ ಮಾಧ್ಯಮವು ಆಧುನಿಕ ಯುಗದಲ್ಲಿಗಾರೆಯನ್ನು ತಯಾರಿಸುವ ವಸ್ತುಗಳು ಕಡಿಮೆ ಪ್ರಮಾಣದಲ್ಲಿ ಸಿಗುವುದರಿಂದ ಹಾಗೂ ಹೆಚ್ಚಿನ ಕಾಲಾವಧಿ ಬೇಕಾಗಿರುವುದರಿಂದ ಆಧುನಿಕಯುಗದಲ್ಲಿ ಸಿಮೆಂಟ್ ಮಾಧ್ಯಮವನ್ನು ಬಳಸಲು ಪ್ರಾರಂಭಿಸಿದರು. ಆಧುನಿಕ ಕಾಲದಲ್ಲಿ ಸಹ ಶಿಲ್ಪದ ರಚನೆಯಲ್ಲಿ ಸಿಮೆಂಟನ್ನು ಹೆಚ್ಚಾಗಿ ಬಳಸಿಕೊಳ್ಳುತ್ತಾರೆ. ಹೀಗೆ ಮಾಡುವುದರಿಂದ ಹೆಚ್ಚು ಕಾಲಾವಧಿ ಶಿಲ್ಪಗಳು ನಶಿಸಿಹೋಗದಂತೆ ಇರುತ್ತವೆ. ಪ್ರಸ್ತುತ ಸಂದರ್ಭದಲ್ಲಿ ಎಲ್ಲಾರೂ ಬಳಸುವಂತಹ ಮಾಧ್ಯಮವಾಗಿದೆ.

ಸಿಮೆಂಟ್ ಮಾಧ್ಯಮವನ್ನು ಮನೆಕಟ್ಟಲು ರಸ್ತೆಗಳಿಗೆ ಬಳಸುವುದಲ್ಲದೇ ದೇವಾಲಯ ಮತ್ತುಅದರಲ್ಲಿರುವ ಶಿಲ್ಪಗಳ ರಚನೆಗೆ ಹೆಚ್ಚಾಗಿ ಬಳಸುತ್ತಿದ್ದರು. ಇತ್ತೀಚೀನ ದಿನಗಳಲ್ಲಿ ಸಿಮೆಂಟ್ ಮಾಧ್ಯಮದಲ್ಲಿ ಅನೇಕ ಬದಲಾವಣೆಯಾಗಿರುವುದನ್ನು ಕಾಣುತ್ತೇವೆ. ಪ್ರಸ್ತುತ ಸಂದರ್ಭದಲ್ಲಿ ಆಧುನಿಕ ಯುವ ಕಲಾವಿದರು ವಿವಿಧ ನಮೂನೆಗಳ ಭಿತ್ತಿಶಿಲ್ಪಗಳನ್ನು ರಚಿಸುವುದನ್ನು ಕಾಣುತ್ತೇವೆ. ಕೆಲವು ಕಲಾವಿದರು ರಿಯಾಲಿಸ್ಟಿಕ್ ಭಿತ್ತಿಶಿಲ್ಪಗಳನ್ನು ಮಾಡಿದರೆ, ಮತ್ತೆ ಕೆಲವರು ಕ್ರಿಯೆಟಿವ್ ಮಾದರಿಯ ಭಿತ್ತಿಶಿಲ್ಪಗಳನ್ನು ರಚಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಹಿಂದಿನ ಕಾಲದಲ್ಲಿ ಯಾವುದೇ ಶಿಲ್ಪವನ್ನು ರಚಿಸಬೇಕಾದರೆ ಅದರದೇ ಆದಂತಹ ಕೆಲವು ನಿಯಮಗಳಿದ್ದವು. ಆ ನಿಯಮಗಳಿಗನುಸಾರವಾಗಿ ಶಿಲ್ಪಗಳನ್ನು ರಚಿಸುತ್ತಿದ್ದರು. ಆದರೆ ಆಧುನಿಕ ಕಲಾವಿದರು ರಚಿಸುವಂತಹ ಭಿತ್ತಿಶಿಲ್ಪದಲ್ಲಿ ಇಂತಹ ಯಾವುದೇ ನಿಯಮಗಳು ಭಿತ್ತಿಶಿಲ್ಪದಲ್ಲಿ ಕಂಡುಬರುವುದಿಲ್ಲ. ಇಲ್ಲಿ ಕಲಾವಿದನ ಭಾವನೆಗೆ ತಕ್ಕಂತೆ ಇಲ್ಲವೇ ಆ ಕಲಾಕೃತಿಯು ಕಲಾವಿದನ ಮನಸ್ಸಿಗೆ ಹತ್ತಿರವಾದರೆ ಅಂದರೆ ಸಂತೋಷವನ್ನುಂಟು ಮಾಡಿದರೆ ರಚಿಸಿದಂತಹ ಕಲಾವಿದನಿಗೆ ಆನಂದಮಯವಾಗುವುದು ಎಂದು ಕಲಾವಿದರಾದ ರಮೇಶ ಬಂಡ್ರಿಯವರು ಹೇಳುತ್ತಾರೆ.

ಆಧುನಿಕ ಕಾಲದಲ್ಲಿ ಒಂದು ಶಿಲ್ಪ ಅಥವಾ ಚಿತ್ರ ಹೀಗೆಯೇ ರಚನೆಯಾಗಬೇಕು ಎಂದುಕೊಳ್ಳದೇ ಆ ಸ್ಥಳದಲ್ಲಿ ಕಲಾವಿದನಿಗೆ ಕಂಡ ರೂಪರೇಶೆಗಳಿಗೆ ಒಂದು ಆಕಾರವನ್ನು ಕೊಟ್ಟು ಭಿತ್ತಿಶಿಲ್ಪವನ್ನು ರಚನೆ ಮಾಡುತ್ತಿದ್ದರು. ಸದ್ಯದ ಪರಿಸ್ಥಿತಿಯನ್ನು ಗಮನಿಸಿದಾಗ ಆಧುನಿಕ ಕಲಾವಿದರು ಕಾಂಪೌಂಡಿನ ಗೋಡೆಗಳ ಮೇಲೆ ಮನೆಗಳು ಸುಂದರವಾಗಿ ಕಾಣುವ ನಿಟ್ಟಿನಲ್ಲಿ, ಕಲ್ಯಾಣಮಂಟಪಗಳ ಆಕರ್ಷಕವಾಗಿ ಕಾಣಲೆಂದು ಬಾರ್ ಅಂಡ್ ರೆಸ್ಟೋರೆಂಟ್, ಹೋಟೆಲ್ ಸಂಘ ಸಂಸ್ಥೆಗಳು ಸ್ಥಾಪಿಸಿದ ಕಟ್ಟಡಗಳ ಮೇಲೆ ವಿವಿಧ ಮಾಧ್ಯಮದಲ್ಲಿ ರಚಿಸಿಕೊಂಡಂತಹ ಭಿತ್ತಿಚಿತ್ರ/ಶಿಲ್ಪಗಳನ್ನು ಕಾಣಬಹುದಾಗಿದೆ, ಎಂದು ಶಿಲ್ಪಕಲಾವಿದರಾದಂತಹ ಎಚ್.ಎನ್.ಕೃಷ್ಣಮೂರ್ತಿಯವರು ಹೇಳುತ್ತಾರೆ.

### ಶಿವ ಮತ್ತು ಗಣಪತಿ

ಈ ಸಿಮೆಂಟಿನ ಭಿತ್ತಿಶಿಲ್ಪವನ್ನು ೧೯೮೪ರಲ್ಲಿ ೧೦x೧೫ ಅಡಿ ಅಳತೆ ಹೊಂದಿದ್ದು, ಬೆಂಗಳೂರಿನಲ್ಲಿರುವ ಶ್ರೀ ಧರ್ಮಸ್ಥಳ ಮಂಜುನಾಥ ಕಲ್ಯಾಣ ಮಂಟಪದಲ್ಲಿ ಭಿತ್ತಿಯ ಮೇಲೆ ಕಾಣಬಹುದು.ಇದನ್ನು ಜಿ.ಎಸ್.ಶೆಣೈ ಮತ್ತು ಭಾಸ್ಕರರಾವ್ ರವರು ರಚಿಸಿದ್ದಾರೆ.

ಈ ಭಿತ್ತಿಶಿಲ್ಪದ ಎಡಭಾಗದಲ್ಲಿ ಶಿವಲಿಂಗವನ್ನು ಸುತ್ತಿಕೊಂಡು ಹಾವು ಎಡೆಗಳನ್ನು ಬಿಚ್ಚಿಕೊಂಡಿರುವುದನ್ನು ಕಾಣುತ್ತೇವೆ. ಲಿಂಗವನ್ನು ನೀಲಿ ಬಣ್ಣದಿಂದ ಅದರ ಮೇಲೆ ಕಣ್ಣನ್ನು ಕೆಂಪು ಬಣ್ಣದಿಂದ ಚಿತ್ರಿಸಿದ್ದು, ನಾಮವನ್ನು ಬಿಳಿಯ ಬಣ್ಣದಿಂದ ಕೊರೆದಿದ್ದಾರೆ. ಹಿಂದಿನ ಭಾಗದಲ್ಲಿ ಹಸಿರು ಬಣ್ಣದಿಂದ ಕೂಡಿದ ಭಿತ್ತಿಮಾಧ್ಯಮವಿದೆ. ಅದರ ಬಲಭಾಗದಲ್ಲಿ ನಿಂತಿರುವ ಹೋರಿಯನ್ನು ಕಾಣಬಹುದು. ಮುಖಕ್ಕೆ ಕಂದು ಬಣ್ಣ ಹಚ್ಚಿ ಕಾಲು ಹೊಟ್ಟೆ, ಗೋಪುರ ಇವುಗಳಿಗೆ ಕೇಸರಿ, ಹಸಿರು, ನೀಲಿ ಬಣ್ಣಗಳನ್ನು ಹಚ್ಚಲಾಗಿದೆ. ಇಲ್ಲಿದೇವಾನು ದೇವತೆಗಳ ಪಾದಗಳಿದ್ದು ಅವುಗಳನ್ನು ಹಳದಿ, ಕೆಂಪು, ಕಂದು, ನೀಲಿ, ಬಣ್ಣದಿಂದ ಕೂಡಿವೆ. ಅದರ ಪಕ್ಕದಲ್ಲಿ ಎರೆದು ಹಾವುಗಳು ಸುತ್ತಿಕೊಂಡಿರುವ ಹಾಗೆ ಕಾಣುತ್ತವೆ. ಇದರಲ್ಲಿ ಹಳದಿ ಬಣ್ಣ ಕಂದುಗಂಪು ಹಸಿರು, ಬೂದು, ನೀಲಿ ಬಣ್ಣದಿಂದ ಕೂಡಿದೆ. ಇದರ ಮೇಲೆ ಹಿಂದಿಯ ಅಕ್ಷರಗಳನ್ನು ಕಾಣಬಹುದು. ಪಕ್ಕದಲ್ಲಿಯೇ ಗಣಪತಿಯ ಶಿಲ್ಪವಿದ್ದು, ಹಣೆ ಕಣ್ಣುಗಳ ಭಾಗವನ್ನು ಕಂದುಬಣ್ಣದಿಂದ ಕಿವಿಯ ಬಣ್ಣವನ್ನು ಬೂದು ಬಣ್ಣದಿಂದ ಕಿರೀಟವನ್ನು ಕೆಂಪುಬಣ್ಣದಿಂದ ಸೊಂಡಿಲನ್ನು ಹಳದಿ ಬಣ್ಣದಿಂದ ಎಡಬದಿಯ ಹಸ್ತವನ್ನು ನೀಲಿಬಣ್ಣದಿಂದ ಬಲಬದಿಯ ಹಸ್ತವನ್ನು ಬೂದು ಬಣ್ಣದಿಂದ ಸೊಂಟಕ್ಕೆ ಸುತ್ತಿಕೊಂಡಂತಹ ಬಟ್ಟೆಯನ್ನು ನೀಲಿಮಾಧ್ಯಮದಿಂದ ಎಡಪಾದ ಕಂದುಬಣ್ಣವಾದರೆ ಬಲ ಪಾದವನ್ನು ಹಳದಿ ಬಣ್ಣದಿಂದ ರಚಿಸಿದ್ದಾರೆ. ಒಟ್ಟಾರೆಯಾಗಿ ಕಲ್ಯಾಣಮಂಟಪದ ಸೌಂದರ್ಯವನ್ನು ಈ ಭಿತ್ತಿಚಿತ್ರ ಹೆಚ್ಚಿಸುತ್ತದೆ.

### ಯಶೋಧರಾ ಕೃಷ್ಣ

ಯಶೋಧರಾ ಮತ್ತು ಕೃಷ್ಣ ಈ ಶಿಲ್ಪವು ಬೆಂಗಳೂರಿನ ತ್ರಿಭುವನ ಚಿತ್ರಮಂದಿರ ಭಿತ್ತಿಯ ಮೇಲೆ ಸಿಮೆಂಟ್ ಮಾಧ್ಯಮದಿಂದ ರಚಿಸಿದ್ದು, ೧೦x೧೦ ಅಡಿ ಅಳತೆಯನ್ನು ಹೊಂದಿದೆ. ಈ ಭಿತ್ತಿಶಿಲ್ಪಕೃತಿಯಲ್ಲಿ ಕೃಷ್ಣನು ಅವರ ತಾಯಿಯಾದ ಯಶೋಧರೆಯ ಕಡೆಗೆ ಬರುತ್ತಿರುವುದನ್ನು ಕಾಣಬಹುದು. ಇಲ್ಲಿ ಯಶೋಧರೆಯ ತನಗೆಲ್ಲದ ಮೇಲೆ ಕೈಯನ್ನು ಇಟ್ಟುಕೊಂಡು ಕೃಷ್ಣನು ಬರುತ್ತಿರುವುದನ್ನು ಕಾಣುತ್ತೇವೆ. ಯಶೋಧರೆಯು ಕುತ್ತಿಗೆಗೆ ಸರವನ್ನು ಕೊಟ್ಟಿದ್ದು, ತಲೆಯ ಭಾಗಕ್ಕೆ ಕಪ್ಪುಬಣ್ಣಲೇಪಿಸಿ ಹಸಿರು ರವಿಕೆಯನ್ನು ತೊಟ್ಟಿದ್ದು, ಕೆಂಪು ವಸ್ತ್ರವನ್ನು ಧರಿಸಿದ್ದಾಳೆ. ಕಾಲಿಗೆ ಚೈನು ಹಾಕಿಕೊಂಡಿರುವುದನ್ನು ಕಾಣಬಹುದಾಗಿದೆ.

ಕೃಷ್ಣನು ತನ್ನ ತಾಯಿಯ ಕಡೆ ನೋಡಿಕೊಂಡು ಬಾಯಿಯನ್ನು ತೆಗೆದಿರುವುದನ್ನು ಕಾಣುತ್ತೇವೆ. ಕೃಷ್ಣನ ಮೈ ಬಣ್ಣವನ್ನು ನೀಲಿಬಣ್ಣದಿಂದ ರಚಿಸಿದ್ದು ಕೊರಳು, ತೋಳು, ಕೈ, ಕಾಲುಗಳಿಗೆ ಸರಗಳನ್ನು ಹಾಕಿಕೊಂಡಿರುವುದನ್ನು ಕಾಣಬಹುದು. ಕೃಷ್ಣನ ಮೇಲ್ಭಾಗದಲ್ಲಿ ದೊಡ್ಡಗಾತ್ರದ ಬಾಯಿ ತೆಗೆದಿರುವುದನ್ನು ಕಾಣುತ್ತೇವೆ. ಅದರ ಮೇಲೆ ಸ್ವಲ್ಪ ಮೂಗಿನ ಭಾಗ ಕಾಣಿಸುತ್ತದೆ. ಅದರ ಎಡಭಾಗದಲ್ಲಿ ಇಬ್ಬರ ಮುಖಗಳನ್ನು ಕಾಣಬಹುದು. ಈ ರೀತಿಯ ಭಿತ್ತಿಶಿಲ್ಪ ರಚನೆ ಮಾಡುವಾಗ ಒಬ್ಬರಿಂದ ಮತ್ತೊಬ್ಬರ ನಡುವೆ, ಖಾಲಿ ಸ್ಥಳವನ್ನು ಬಿಟ್ಟಿದ್ದರಿಂದ ಅದು ಸುಂದರವಾಗಿ ಕಾಣಿಸುತ್ತದೆ.

## ಓಟ

ಈ ಸಿಮೆಂಟಿನ ಭಿತ್ತಿ ಶಿಲ್ಪವನ್ನು ೨೦೦೬ರಲ್ಲಿ ರಚಿಸಿದ್ದು, ೩x೪ ಅಡಿ ಅಳತೆಯನ್ನು ಹೊಂದಿದ್ದು. ಎಚ್.ಎನ್.ಕೃಷ್ಣಮೂರ್ತಿಯವರು ಸಿಮೆಂಟ್ ಮಾಧ್ಯಮದಲ್ಲಿ ತೀರ್ಥಹಳ್ಳಿಯಲ್ಲಿ ರಚಿಸಿದ್ದಾರೆ.

ಈ ಭಿತ್ತಿಶಿಲ್ಪದಲ್ಲಿ ಮಲೆನಾಡಿನ ಸೊಬಗನ್ನು ಬಿಂಬಿಸುವಂತ ಓಟವನ್ನು ವಿವಿಧ ಭಂಗಿಯಲ್ಲಿ ಓಡುತ್ತಿರುವುದನ್ನು ಕಾಣುತ್ತೇವೆ. ಭಿತ್ತಿಶಿಲ್ಪದ ಎಡಭಾಗದಲ್ಲಿರುವ ಮಹಿಳೆಯು ತನ್ನ ಎಡಗೈಯನ್ನು ಮುಂದಿಟ್ಟು ಬಲಗೈಯನ್ನು ಎಡಭಾಗಕ್ಕೆ ತೆಗೆದುಕೊಂಡು ಓಡುತ್ತಿರುವುದನ್ನು ಕಾಣುತ್ತೇವೆ. ಇಲ್ಲಿ ಎಲ್ಲಾ ಭಿತ್ತಿಗಳಲ್ಲಿ ಜೀವಂತಿಕೆ ಇರುವುದನ್ನು ಕಾಣುತ್ತೇವೆ.

## ಯಕ್ಷಗಾನ

ಈ ಭಿತ್ತಿಶಿಲ್ಪವನ್ನು ೨೦೧೧ರಲ್ಲಿ ರಚಿಸಿದ್ದು, ೧೮x೨೪ ಇಂಚನ್ನು ಒಳಗೊಂಡಿದ್ದು, ಹುಸೇನರವರು ಗಡಿಕಲ್ ಮ್ಯೂಜಿಯಂ ಕುಪ್ಪಳ್ಳಿಯಲ್ಲಿ ಸಿಮೆಂಟ್ ಮಾಧ್ಯಮದಿಂದ ರಚಿಸಿದ್ದಾರೆ. ಈ ಭಿತ್ತಿಶಿಲ್ಪವನ್ನು ಯಕ್ಷಗಾನಕ್ಕೆ ಸಂಬಂಧಿಸಿದಂತೆ ಚಿತ್ರಿಸಿದ್ದು, ಮುಖದ ಭಾಗಕ್ಕೆ ಹಲವು ಬಣ್ಣಗಳನ್ನು ಹಚ್ಚಿರುವುದನ್ನು ಕಾಣುತ್ತೇವೆ. ನೆತ್ತಿಯ ಭಾಗಕ್ಕೆ ಬಿಳಿಯ ಬಣ್ಣವನ್ನು ಹಚ್ಚಿ ಅದರ ಮಧ್ಯಭಾಗದಲ್ಲಿ ಕೆಂಪು ವರ್ಣವನ್ನು ವೃತ್ತಾಕಾರವಾಗಿಟ್ಟಿರುವುದನ್ನು ಕಾಣುತ್ತೇವೆ. ಕೆನ್ನೆಯ ಭಾಗಕ್ಕೆ ಹಳದಿ ಬಣ್ಣವನ್ನು ಹಚ್ಚಿ ದಪ್ಪನೆಯ ಮೀಸೆಯನ್ನು ಕಪ್ಪು ಬಣ್ಣದಿಂದ ರಚಿಸಿದ್ದಾರೆ. ಕಣ್ಣುಗಳ ಭಾಗವನ್ನು ಬಿಳುಪಾಗಿ ಚಿತ್ರಿಸಿ ಗುಂಡೆಯ ಭಾಗಕ್ಕೆ ಕಪ್ಪು ಬಣ್ಣವನ್ನು ಹಚ್ಚಿದ್ದಾರೆ. ಕಿವಿಗೆ ವೃತ್ತಾಕಾರವಾದ ರಚನೆ ಮಾಡಿ ಹಳದಿ ಮತ್ತು ಕೆಂಪು ಬಣ್ಣದಿಂದ ರಚಿತವಾಗಿದೆ. ಕಿರೀಟವನ್ನು ಹಳದಿಯ ಬಣ್ಣದಿಂದ ತುದಿಯನ್ನು ಹಸಿರು ಬಣ್ಣದಿಂದ ಚಿತ್ರಿಸಿದ್ದಾರೆ. ಕಪ್ಪು ಮತ್ತು ಕೆಂಪು ಬಣ್ಣ ಮತ್ತು ಬಿಳಿಯ ಬಣ್ಣದಿಂದ ವಸ್ತುಗಳನ್ನು ಅಲಂಕರಿಸಿದ್ದಾರೆ. ಒಟ್ಟಾರೆಯಾಗಿ ನೋಡುಗರ ದೃಷ್ಮಿಯನ್ನು ಆಕರ್ಷಿಸುತ್ತದೆ.

## ಕಾಮಧೇನು

ಭಿತ್ತಿಶಿಲ್ಪವನ್ನು ೨೦೧೧ರಲ್ಲಿ ರಚಿಸಿದ್ದು, ೨೪x೫೪ ಇಂಚು ಅಳತೆಯನ್ನು ಹೊಂದಿದೆ. ಇದನ್ನು ಹುಸೇನರವರು ಗಡಿಕಲ್ ಮ್ಯೂಜಿಯಂ ಕುಪ್ಪಳ್ಳಿಯಲ್ಲಿ ಸಿಮೆಂಟ್ ಮಾಧ್ಯಮದಿಂದ ರಚಿಸಿದ್ದಾರೆ.

ಈ ಭಿತ್ತಿಶಿಲ್ಪವನ್ನು ಕಾಮಧೇನುವಿಗೆ ಸಂಬಂಧಿಸಿದಂತೆ ಕಾಮಧೇನುವಿನ ಮುಖವನ್ನು ತೆಗೆದು ಒಂದು ಹೆಣ್ಣಿನ ಮುಖವನ್ನು ಮಾಡಿ ಎರಡು ಕೋಡನ್ನು ಕಾಣಬಹುದು. ಉದ್ದನೆಯ ಜಡೆಯಿದ್ದು, ಅದಕ್ಕೆ ಕಪ್ಪು ಬಣ್ಣವನ್ನು ಲೇಪಿಸಿ ಹಳದಿ ಬಣ್ಣದಿಂದ ಶೃಂಗರಿಸಿರುವುದನ್ನು ಕಾಣುತ್ತೇವೆ. ಕಾಮಧೇನುವಿನ ಕೊರಳಿನಲ್ಲಿ ಅನೇಕ ಆಭರಣಗಳಿಂದ ತುಂಬಿದ್ದು, ರೆಕ್ಕೆಇರುವುದನ್ನು ಕಾಣುತ್ತೇವೆ. ಇನ್ನುಳಿದಂತೆಲ್ಲ ಹಸುವಿನ ಆಕಾರವನ್ನು ಹೋಲುವ ನಾಲ್ಕು ಕಾಲುಗಳು, ಕೆಚ್ಚಲು, ಬಾಲವನ್ನು ಕಾಣಬಹುದು.

ಕಾಮಧೇನುವಿನ ಬಾಲದ ಹಿಂದೆ ನವಿಲು ಗರಿಗಳಿಂದ ಕೂಡಿದು, ಹಸಿರು ಹಳದಿ, ನೀಲಿ ಬಣ್ಣದಿಂದ ರಚಿತವಾಗಿದೆ. ಕಾಮಧೇನುವಿನ ಮುಂದೆ ಇಬ್ಬರು ಸ್ತ್ರೀಯರು ನಿಂತಿದ್ದು, ಒಬ್ಬರು ಚಾಮರ ಹಿಡಿದಿದ್ದರೆ

ಮತ್ತೊಬ್ಬರು ಛತ್ರಿ ಹಿಡಿದಿದ್ದು, ಅವರ ಮೈ ಬಣ್ಣವು ಹಳದಿ ಬಣ್ಣದಿಂದ ಕೂಡಿದೆ. ರವಿಕೆ ನೀಲಿ ಮತ್ತು ಹಳದಿ, ಸೀರೆ ಕೆಂಪು, ಹಸಿರು ಮತ್ತು ಆಭರಣಗಳನ್ನು ತೊಟ್ಟು ನಿಂತಿದ್ದಾರೆ. ಕಾಮಧೇನುವಿನ ಹಿಂದಿನ ಬದಿಯಲ್ಲಿ ಮೂವರು ಸ್ತ್ರೀಯರು ನಿಂತಿದ್ದು, ಮೊದಲು ಒಬ್ಬ ಹೆಣ್ಣುಮಗಳು ಬುಟ್ಟಿಯಲ್ಲಿ ಹಣ್ಣುಗಳನ್ನು ತುಂಬಿಕೊಂಡು ನಿಂತಿದ್ದಾಳೆ. ಅವಳು ಗುಲಾಬಿ ಬಣ್ಣದ ರವಿಕೆ, ನೀಲಿ ಬಣ್ಣದ ಸೀರೆ ಹುಟ್ಟಿದ್ದಾಳೆ. ಅವರ ಹಿಂದೆ ಇಬ್ಬರು ಹೆಣ್ಣುಮಕ್ಕಳು ಕಾವಲುಗಾರರು ಚಾಮರಗಳನ್ನು ಹಿಡಿದು ನಿಂತಿದ್ದಾರೆ. ಇವರ ಮೈಬಣ್ಣವು ಹಳದಿ ಬಣ್ಣದಿಂದ ಕೂಡಿದ್ದು. ಕಂದುಗೆಂಪು ಬಣ್ಣದಿಂದ ಸೀರೆಯ ಬಣ್ಣವನ್ನು ಲೇಪಿಸಿದ್ದಾರೆ. ಒಟ್ಟಾರೆಯಾಗಿ ಈ ಭಿತ್ತಿಶಿಲ್ಪ ಸುಂದರವಾಗಿ ಕಾಣಿಸುತ್ತದೆ.

**ಸೋಮನ ಕುಣಿತ**

ಭಿತ್ತಿಶಿಲ್ಪವನ್ನು ೨೦೦೩ರಲ್ಲಿ ರಚಿಸಿದ್ದು, ೬x೬ ಅಡಿ ಅಳತೆಯನ್ನು ಹೊಂದಿದ್ದು, ಹುಸೇನ್‌ರವರು ಕನ್ನಡ ವಿಶ್ವವಿದ್ಯಾಲಯದ ಪಂಪಾಸಭಾಂಗಣದ ಭಿತ್ತಿಯ ಮೇಲೆ ಸಿಮೆಂಟ್ ಮಾಧ್ಯಮದಿಂದ ರಚಿಸಿದ್ದಾರೆ.

ಈ ಭಿತ್ತಿಶಿಲ್ಪವು ಸೋಮನ ಕುಣಿತಕ್ಕೆ ಸಂಬಂಧಿಸಿದಾಗಿದ್ದು, ದೊಡ್ಡ ಗಾತ್ರದ ಮುಖವನ್ನು ಚಿತ್ರಿಸಿ ಹಣೆಯ ಮೇಲೆ ಒಂದು ಬಿಳಿಯ ಪಟ್ಟಿಯನ್ನು ಎಳೆದು ಅದರ ಕೆಳಗೆ ಕೆಂಪನೆಯ ವೃತ್ತಾಕಾರವಾಗಿರುವುದನ್ನು ಗಮನಿಸಬಹುದು. ಕಣ್ಣುಗಳ ಗುಡ್ಡೆಗಳು ದೊಡ್ಡ ಗಾತ್ರದಲ್ಲಿ ಚಿತ್ರಿಸಿ ಅದರ ಗುಡ್ಡೆಗಳನ್ನು ದಪ್ಪನಾಗಿ ಕಪ್ಪುಬಣ್ಣದಿಂದ ರಚಿಸಿದ್ದಾರೆ. ದಪ್ಪನಾದ ಮೀಸೆಯನ್ನು ತಿರುವಿ ಕೊರೆ ಹಲ್ಲುಗಳನ್ನು ಬಿಟ್ಟುಕೊಂಡು ಕುತ್ತಿಗೆ ಸರವನ್ನು ಹಾಕಿಕೊಂಡು ಮೈಯನ್ನು ಸಪೂರವಾಗಿ ಮಾಡಿದು ತನ್ನ ಬಲಗೈಯಲ್ಲಿ ಕೋಳನ್ನು ಹಿಡಿದಿದ್ದು ಎಡಗೈಯಲ್ಲಿ ನವಿಲುಗರಿಯ ದಿಂಡನ್ನು ಹಿಡಿದುಕೊಂಡು ನಿಂತಿರುವುದನ್ನು ಕಾಣುತ್ತೇವೆ.

**ಬರಗಾಲ**

ಈ ಭಿತ್ತಿಶಿಲ್ಪವನ್ನು ಗುಲ್ಬರ್ಗಾ ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಪೀಠದ ಪ್ರವೇಶದ ಬಾಗಿಲಿನ ಪಕ್ಕದಲ್ಲಿ ೧೫x೧೦ ಅಡಿ ಅಳತೆಯನ್ನು ಹೊಂದಿರುವುದನ್ನು ಕಾಣುತ್ತೇವೆ.

ಈ ಭಿತ್ತಿಶಿಲ್ಪದಲ್ಲಿ ಬರಗಾಲದ ಸನ್ನಿವೇಶವನ್ನು ಇಲ್ಲಿನೋಡಬಹುದು. ಇಬ್ಬರು ಹೆಂಗಸರು ಆಕಾಶದತ್ತ ನೋಡುತ್ತಿರುವುದನ್ನು ಕಾಣುತ್ತೇವೆ. ಇದು ಸಿಮೆಂಟಿನಲ್ಲಿ ಸಪೂರವಾಗಿ ಮಾಡಿದ್ದು, ಮತ್ತು ಸಣ್ಣ ಹೆಣ್ಣುಮಗುವು ನಿಂತಿರುವುದನ್ನು ಕಾಣಬಹುದು. ಇದರ ಹಿಂಭಾಗದಲ್ಲಿ ಸಿಂಹವು ಘರ್ಜಿಸುತ್ತಾ ನಿಂತಿದ್ದು ಅದರ ಕಣ್ಣು ದಪ್ಪದಾಗಿ ಚಿತ್ರಿಸಿದ್ದು, ಅದರ ಬಾಯಿಯನ್ನು ತೆಗೆದಿರುವುದನ್ನು ಕಾಣಬಹುದು. ಇಲ್ಲಿ ಮೇಲಿನ ಭಾಗದಲ್ಲಿ ಸೂರ್ಯನನ್ನು ಚಿತ್ರಿಸಿದ್ದು, ಈಗಿನ ಆಧುನಿಕ ಯುಗದಲ್ಲಿ ಕಲಾವಿದರ ಮನಸ್ಸಿಗೆ ತಕ್ಕಂತೆ ಚಿತ್ರರಚನೆ ಮಾಡುತ್ತಾರೆ.

**ಗಣಪತಿ ಉತ್ಸವ**

ಭಿತ್ತಿಶಿಲ್ಪವನ್ನು ೨೦೦೮ ಅಲಮಟ್ಟಿಯಲ್ಲಿ ಗೌರಿಶಂಕರವರು ರಚಿಸಿದ್ದು, ೮x೧೦ ಅಡಿ ಅಳತೆಯನ್ನು ಹೊಂದಿದ್ದು. ಸಿಮೆಂಟ್ ಮಾಧ್ಯಮದಲ್ಲಿ ರಚಿಸಿದ್ದಾರೆ.

ಈ ಭಿತ್ತಿಶಿಲ್ಪವು ಗಣಪತಿಯ ಉತ್ಸವಕ್ಕೆ ಸಂಬಂಧಸಿದ್ದಾಗಿದ್ದು, ಊರಿನ ಜನರೆಲ್ಲರೂ ಗಣಪತಿಗಳನ್ನು ತೆಗೆದುಕೊಂಡು ವಿರ್ಸಜಿಸಲಿಕ್ಕೆ ಹೋಗುತ್ತಿದ್ದಾರೆ. ಕೆಲವರು ಪಟಾಕಿಯನ್ನು ಸಿಡಿಸುತ್ತಾ ಮತ್ತೆ ಕೆಲವರು ತಮಟೆ ಹೊಡೆಯುತ್ತಾ ಜುಬ್ಬಾ ಮತ್ತು ದೊತ್ರಾಗಳನ್ನು ಧರಿಸಿಕೊಂಡು ಹೋಗುತ್ತಿದ್ದು. ಕೆಲವು ಹುಡುಗರು ನೃತ್ಯವನ್ನು ಮಾಡಿಕೊಂಡು ಹೋಗುತ್ತಿರುವುದನ್ನು ಕಾಣುತ್ತೇವೆ. ಹೀಗೆ ಊರಿನ ಜನರೆಲ್ಲರೂ ಹಿಂಡು ಹಿಂಡಾಗಿ ಬರುತ್ತಿರುವುದನ್ನು ನೋಡುತ್ತೇವೆ. ಭಿತ್ತಿಶಿಲ್ಪದ ಎಡಭಾಗದಲ್ಲಿ ಹೆಂಗಸರು ಮತ್ತು ಹೆಣ್ಣುಮಕ್ಕಳು ನೋಡುತ್ತಿರುವುದನ್ನು ಕಾಣುತ್ತೇವೆ. ಇವರ ಹಿಂಬದಿಯಲ್ಲಿ ಮರಗಳು ಮನೆಗಳು ಸುಂದರವಾಗಿ ಕಾಣುತ್ತಿರುವುದನ್ನು ನೋಡುತ್ತೇವೆ.

### ಗ್ರಾಮ ದೇವತೆ

ಭಿತ್ತಿಶಿಲ್ಪವನ್ನು ೧೯೯೭ರಲ್ಲಿ ಜೈಕುಮಾರ ಮತ್ತು ಹುಸೇನ ರವರು ರಚಿಸಿದ್ದು, ೮x೩೦ ಅಡಿ ಅಳತೆಯಿಂದ ಕೂಡಿದ್ದು, ಸಿಮೆಂಟ್ ಮಾಧ್ಯಮದಿಂದ ಕನ್ನಡ ವಿಶ್ವವಿದ್ಯಾಲಯದ ಭುವನ ವಿಜಯದ ಮುಖ್ಯದ್ವಾರದಲ್ಲಿ ಪಕ್ಕದ ಭಿತ್ತಿಗೆ ರಚಿಸಿದ್ದಾರೆ.

ಈ ಭಿತ್ತಿಶಿಲ್ಪವು ಗ್ರಾಮದೇವತೆಗೆ ಸಂಬಂಧಿಸಿದ್ದಾಗಿದ್ದು, ಮುಖವನ್ನು ಮಾತ್ರ ಅತಿದೊಡ್ಡದಾಗಿ ರಚಿಸಿದ್ದು, ಕಣ್ಣು ಮತ್ತು ಮೂಗಿನ ಭಾಗಕ್ಕೆ ಅಲ್ಯೂಮಿನಿಯಂ ಬಣ್ಣದಿಂದ ರಚಿಸಿದ್ದು, ಹಣೆಯ ಭಾಗಕ್ಕೆ ಹಳದಿ ಬಣ್ಣದಿಂದ ಮತ್ತು ಇನ್ನೂಳಿದ ಭಾಗಕ್ಕೆ ಕೆಂಪು ಬಣ್ಣದಿಂದ ಲೇಪಿಸಿದ್ದಾರೆ. ತಲೆಯ ಕೂದಲಿಗೆ ಕಪ್ಪುಬಣ್ಣವನ್ನು ಲೇಪಿಸಿದ್ದಾರೆ. ಕಿವಿಗೆ ಹಗಲವಾದ ಕಿವಿ ಮರವನ್ನು ಹಾಕಿಕೊಂಡದ್ದು, ಎಡಭಾಗದಲ್ಲಿ ಎರಡು ಜಿಂಕೆಗಳು ಮತ್ತು ನಾಲ್ಕು ಜನರ ಹೆಂಗೆಳೆಯರು ಚಾಮರ ಛತ್ರಿಗಳನ್ನು ಹಿಡಿದುಕೊಂಡು ನಿಂತಿದ್ದು, ಅವರು ಕಪ್ಪು,ನೀಲಿ, ಬಣ್ಣದ ರವಿಕೆಯನ್ನು ತೊಟ್ಟಿದ್ದು ನೀಲಿ, ಹಳದಿ, ಕಪ್ಪು, ಹಸಿರು ಮಿಶ್ರಿತ ನೀಲಿಬಣ್ಣದ ಸೀರೆಗಳನ್ನು ಹುಟ್ಟಿಕೊಂಡಿರುವುದನ್ನು ಕಾಣುತ್ತೇವೆ. ಬಲಭಾಗದಲ್ಲಿಯೂ ಸಹಿತ ಚಾಮರಗಳು ಮತ್ತು ಛತ್ರಿಗಳನ್ನು ಹಿಡಿದು ನಿಂತಿದ್ದು, ಅವರ ಮೈ ಬಣ್ಣವನ್ನೆಲ್ಲ ಹಳದಿ ಬಣ್ಣದಲ್ಲಿ ಬಿಳಿಯ ಬಣ್ಣವನ್ನು ಮಿಶ್ರಣ ಮಾಡಿ ತೆಳುವಾಗಿ ಹಚ್ಚಿರುವುದನ್ನು ಕಾಣುತ್ತೇವೆ. ಈ ಶಿಲ್ಪಗಳ ಹಿನ್ನೆಲೆಯಲ್ಲಿ ಬೂದು ಬಣ್ಣದಿಂದ ಲೇಪನ ಮಾಡಿದ್ದಾರೆ.

### ಸೂರ್ಯ

ಈ ಭಿತ್ತಿಶಿಲ್ಪವನ್ನು ೨೦೦೭ರಲ್ಲಿ ರಚಿಸಿದ್ದು, ೩x೪ ಅಡಿ ಅಳತೆಯನ್ನು ಹೊಂದಿದ್ದು, ದಿ ಐಡಿಯಲ್ ಫೈನ್ ಆರ್ಟ್‌ನ ಆವರಣದಲ್ಲಿ ವಿದ್ಯಾರ್ಥಿಗಳು ಮಾಡಿದಂತಹ ಸಿಮೆಂಟ್ ಮಾಧ್ಯಮ.

ಭಿತ್ತಿಶಿಲ್ಪವು ಸೂರ್ಯನಿಗೆ ಸಂಬಂಧಿಸಿದ್ದಾಗಿದ್ದು, ಸೂರ್ಯನ ಮುಖವನ್ನು ಮನುಷ್ಯನ ಮುಖದಂತೆ ಮಾಡಿ ಕೂದಲುಗಳು ಕಪ್ಪಾದ ಗೋಲಿಗಳಿಂದ ರಚಿಸಿದ್ದು, ಕಿರಣಗಳನ್ನು ಅಲೆಗಳ ರೂಪದಲ್ಲಿ ತೋರಿಸಿದ್ದಾರೆ. ಅದರ ಎಡಭಾಗದಲ್ಲಿ ನಕ್ಷತ್ರ ಅದರ ಕೆಳಭಾಗದಲ್ಲಿ ನಾಯಿಯ ಚಿತ್ರ ಇರುವುದನ್ನು ಕಾಣುತ್ತೇವೆ. ನಾಯಿಯ

ಬಾಯಿಯನ್ನು ಬಿಟ್ಟುಕೊಂಡಿರುವಂತೆ ಅದರ ಬಲಭಾಗದಲ್ಲಿ ಬುಟ್ಟಿ ಮತ್ತು ಸೂರ್ಯದೇವನು ಆಶೀರ್ವದಿಸುತ್ತಿರುವುದನ್ನು ನೋಡಬಹುದಾಗಿದೆ. ಹಿಂದಿನ ಭಾಗದಲ್ಲಿ ಚುಕ್ಕೆ ಚುಕ್ಕೆ ಆಕಾರವನ್ನು ಹೋಲುವಂತೆ ಮೈವಳಿಕೆಯನ್ನು ಮಾಡಿದ್ದಾರೆ.

**ಜನಪದ ಶಿವಪಾರ್ವತಿ**

ಭಿತ್ತಿಶಿಲ್ಪವನ್ನು ೨೦೧೧ರಲ್ಲಿ ರಚಿಸಿದ್ದು, ೪೮x೩೬ ಇಂಚು ಅಳತೆಯನ್ನು ಹೊಂದಿದೆ. ಹುಸೇನರವರು ಗಡಕಲ್ ಮ್ಯೂಸಿಯಂ ಕುಪ್ಪಳ್ಳಿಯಲ್ಲಿ ಸಿಮೆಂಟ್ ಮಾಧ್ಯಮದಲ್ಲಿ ರಚಿಸಿದ್ದಾರೆ.

ಭಿತ್ತಿಶಿಲ್ಪವು ಜನಪದ ಶೈಲಿಯ ಶಿವಪಾವರ್ತಿಯ ಶಿಲ್ಪವಾಗಿದ್ದು, ಇಬ್ಬರು ಕುಳಿತಿದ್ದು ಶಿವನು ನಗುಮುಖದಿಂದ ಕೂಡಿದ್ದು, ಅವನ ಮೈ ಬಣ್ಣವು ನೀಲಿಬಣ್ಣದಿಂದ ಕೂಡಿದೆ. ಮೀಸೆ ಮತ್ತು ಕಣ್ಣುಗಳು ದಪ್ಪನಾಗಿದ್ದು, ಕೊರಳಿಗೆ ಸುತ್ತುವರೆದಿದ್ದು, ತನ್ನ ತಲೆಯ ಮೇಲೂ ಸಹ ಹಾವು ಮತ್ತು ಗಂಗೆಯನ್ನು ಕಾಣಬಹುದು. ಶಿವನಿಗೆ ನಾಲ್ಕು ಕೈಗಳನ್ನು ಮಾಡಿದ್ದು ಉಪಭಾಗದ ಕೈಯಲ್ಲಿ ಜಿಂಕೆಯನ್ನು ಬಲಭಾಗದ ಕೈಯಲ್ಲಿ ಡಮರು ಮತ್ತು ತ್ರಿಶೂಲವನ್ನು ಹಿಡಿದಿದ್ದು, ಕೊರಳಿಗೆ ಕಂತು ಮತ್ತು ಹಳದಿಯ ಸರಗಳನ್ನು ಹಾಕಿರುವುದನ್ನು ಕಾಣುತ್ತೇವೆ.

ತನ್ನ ಸೊಂಟಕ್ಕೆ ಹುಲಿಯ ಚರ್ಮವನ್ನು ಸುತ್ತಿಕೊಂಡು ಕುಳಿತಿದ್ದಾರೆ. ಪಾರ್ವತಿಯು ಸಹ ನಾಲ್ಕು ಕೈಗಳನ್ನು ಹೊಂದಿದ್ದು, ನಗುಮುಖದಿಂದ ಕೂಡಿದ್ದು ಮುಖದ ಬಣ್ಣವು ಹಳದಿ ಬಣ್ಣದಿಂದ ಕೂಡಿದೆ. ತನ್ನ ಎಡ ಮತ್ತು ಬಲ ಕೈಗಳಲ್ಲಿ ತ್ರಿಶೂಲ ಮತ್ತು ಡಮರುವನ್ನು ಹಿಡಿದಿದ್ದಾರೆ. ಕೊರಳಿನ ಭಾಗಕ್ಕೆ ಹಳದಿ ಬಣ್ಣದಿಂದ ಸರಗಳನ್ನು ಚಿತ್ರಿಸಿದ್ದು, ಕಿರೀಟವು ಸಹ ಹಳದಿ ಬಣ್ಣದಿಂದ ಕೂಡಿದೆ. ತೊಟ್ಟಿರುವ ರವಿಕೆ ನೀಲಿಬಣ್ಣದಿಂದ ಕೂಡಿದ್ದು ಸೀರೆಯು ಹಳದಿ ಬಣ್ಣದಿಂದ ಕೂಡಿದೆ.

**ಸಿಮೆಂಟಿನ ರಚನಾ ವಿಧಾನ**

ಸಿಮೆಂಟ್‌ನ ಉಬ್ಬು ಚಿತ್ರ ರಚನೆ ಮಾಡಬೇಕಾದರೆ ೨ ರೀತಿಯ ವಿಧಾನವನ್ನು ಅನುಸರಿಸುತ್ತಾರೆ.ಮೊದಲನೆಯದಾಗಿ ಕರುಡು ಚಿತ್ರ ರಚಿಸಿಕೊಂಡು ನಂತರದಲ್ಲಿ ಸಿಮೆಂಟ್ ಮತ್ತು ಮರಳನ್ನು ನೀರಿನಲ್ಲಿ ಮಿಶ್ರಣಮಾಡಿಕೊಂಡು ಸ್ವಲ್ಪ ಗಟ್ಟಿಮಾಡಿಕೊಂಡು ಕರುಡು ಚಿತ್ರದಲ್ಲಿರುವಂತೆ ಸಿಮೆಂಟ್‌ನ್ನು ಆಕಾರಕ್ಕೆ ತಕ್ಕಂತೆ ಸ್ವಲ್ಪ ಸ್ವಲ್ಪ ಮೆತ್ತುತ್ತಾ ಹೋದಂತೆಲ್ಲಾ ಒಂದು ಆಕಾರಸೃಷ್ಠಿಯಾಗುತ್ತದೆ. ಕಲಾವಿದನ ಮನಸ್ಸಿನಲ್ಲಿರುವ ಭಾವನೆಗೆ ತಕ್ಕಂತೆ ಆಕಾರಗಳನ್ನು ವೃದ್ಧಿಸುತ್ತಾ ಹೋದಂತೆಲ್ಲಾ ಒಂದು ಭಿತ್ತಿಶಿಲ್ಪದ ಆಕಾರ ಬರುತ್ತದೆ. ನಂತರದಲ್ಲಿ ತ್ಯಾಪೆಯ ಮೂಲಕ ನಮಗೆ ಬೇಕಾದ ಭಾಗಗಳಿಗೆ ತ್ಯಾಪೆಯ ಸಹಾಯದಿಂದ ಸಿಮೆಂಟ್‌ನ್ನು ಮೆತ್ತಬೇಕು, ಅಂತಿಮ ಹಂತದಲ್ಲಿಸಿಮೆಂಟ್ ಪೌಡರನ್ನು ಭಿತ್ತಿಶಿಲ್ಪದ ಮೇಲೆ ಚೆಲ್ಲಿ ಅದನ್ನು ಪಾಲಿಶ್ ಮಾಡಿ ಭಿತ್ತಿಶಿಲ್ಪವನ್ನು ರಚನೆ ಮಾಡುತ್ತಾರೆ.

ಎರಡನೆಯ ಹಂತದಲ್ಲಿ ಮೊದಲು ಸಿಮೆಂಟ್‌ಗೆ ನೀರನ್ನು ಹೆಚ್ಚಿನ ಪ್ರಮಾಣದಲ್ಲಿ ಮಿಶ್ರಣ ಮಾಡಿ ನಾವು ರಚಿಸಿರುವಂತ ಆಕಾರದಲ್ಲಿ ಸುರಿಯಬೇಕು. ನಂತರ ಸ್ವಲ್ಪ ಸಮಯವನ್ನು ಬಿಟ್ಟು ಅದರ ಮೇಲೆ

ಕರಡು ಚಿತ್ರವನ್ನು ರಚನೆ ಮಾಡಿ ನಮಗೆ ಬೇಡವಾದ ಭಾಗಗಳನ್ನು ತ್ಯಾಪೆಯಿಂದ ತೆಗೆದು ಒಂದು ಆಕಾರವನ್ನು ತೆಗೆದ ನಂತರ ತ್ಯಾಪೆಯಿಂದ ಸಹಾಯದಿಂದ ನಮಗೆ ಬೇಕಾದ ಜಾಗಕ್ಕೆ ಸಿಮೆಂಟನ್ನು ಮೆತ್ತಿ ಒಂದು ಆಕಾರವನ್ನು ತೆಗೆಯುತ್ತಾರೆ. ಬಳಸುವ ಪರಿಕರಗಳು:- ಸಿಮೆಂಟ್, ಮರಳು, ತ್ಯಾಪೆಗಳು ಇತ್ಯಾದಿ. ಅನಾದಿಕಾಲದಿಂದಲೂ ಕಲಾವಿದನು ತನ್ನ ಸೃಜನಾತ್ಮಕ ಮನಸ್ಸಿನಿಂದ ಅನೇಕ ಮಾಧ್ಯಮದ ಕಲಾಕೃತಿಗಳನ್ನು ರಚಿಸುತ್ತಾ ಬಂದಿದ್ದಾರೆ. ಈ ಸೃಜನಾತ್ಮಕ ಮನಸ್ಸಿಗೆ ಮಣ್ಣು ಮತ್ತು ಸಿಮೆಂಟ್ ಒಂದು ಉತ್ತಮವಾದಂತಹ ಭಿತ್ತಿಕೃತಿ ರಚನೆಗೆ ಪೂರಕವಾದಂತಹ ಮಾಧ್ಯಮಗಳಾಗಿವೆ. ಇಂದಿನ ದಿನಗಳಲ್ಲಿ ಕಲಾವಿದರು ಮತ್ತು ಕಲಾವಿದ್ಯಾರ್ಥಿಗಳ ಮಣ್ಣು ಮತ್ತು ಸಿಮೆಂಟ್ ಮಾಧ್ಯಮದಲ್ಲಿ ಹೆಚ್ಚು ಆಸಕ್ತಿಯುತವಾಗಿ ರಚಿಸುತ್ತಿರುವುದನ್ನು ಕಾಣುತ್ತೇವೆ.

* * *

ಅಧ್ಯಾಯ - ಆರು

# ಫೈಬರ್ ಮತ್ತು ಮರ ಮಾಧ್ಯಮದ ಭಿತ್ತಿಶಿಲ್ಪ

ಫೈಬರ್ ಮಾಧ್ಯಮವು ಆಧುನಿಕ ಯುಗದಲ್ಲಿ ಹೆಚ್ಚಿನ ಪ್ರಚಲಿತವನ್ನು ಪಡೆದುಕೊಂಡಿರುವುದನ್ನು ಕಾಣಬಹುದು. ಆಧುನಿಕ ಕಲಾವಿದರು ರಚಿಸುವ ಎಲ್ಲಾ ಮಾಧ್ಯಮಗಳಿಗಿಂತ ಫೈಬರ್ ಮಾಧ್ಯದಲ್ಲಿ ಹೆಚ್ಚಾಗಿ ಕಲಾಕೃತಿಗಳನ್ನು ರಚನೆ ಮಾಡುತ್ತಿದ್ದಾರೆ. ಫೈಬರ್ ಮಾಧ್ಯಮ ಇತ್ತೀಚೆಗೆ ಬಂದಂತಹ ಒಂದು ಮಾಧ್ಯಮವಾಗಿದೆ. ಇದು ಭಾರವಿಲ್ಲದ ಮತ್ತು ಬಾಳಿಕೆ ಬರುವಂತಹ ಆಕರ್ಷಣೆ ವಸ್ತುವಾಗಿರುವುದರಿಂದ ದೇವಾಲಯ ಶ್ರೀಮಂತರ ಮನೆ, ಮಠ, ಕಲ್ಯಾಣಮಂಟಪ, ಕಲಾಕಾಲೇಜು, ಉದ್ಯಾನವನಗಳಲ್ಲಿ ಈ ಮಾಧ್ಯಮದ ಕಲಾಕೃತಿಗಳನ್ನು ಕಾಣಬಹುದು. ಈ ಮಾಧ್ಯಮದಲ್ಲಿ ಎರಡು ರೀತಿಯಾದ ಕಲಾಕೃತಿಗಳು ರಚನೆ ಮಾಡಬಹುದು. ದುಂಡುಶಿಲ್ಪ (Relief, Low Relief and high relief, 3D) ರಚನೆ ಮಾಡುವಾಗ ಯಾವುದೇ ವಸ್ತುವಾಗಲಿ ಪ್ರಾಣಿಯಾಗಲಿ, ಪಕ್ಷಿಯಾಗಲಿ ರಚಿಸುತ್ತಿದ್ದರು. ಫೈಬರ್ ಮಾಧ್ಯಮ ಹೊಸದಾಗಿ ಬಂದಾಗ ಇದಕ್ಕಿದ್ದಂತೆ ರಚನೆ ಮಾಡುತ್ತಿರುವುದನ್ನು ಕಾಣುತ್ತಿದ್ದೇವೆ. ಸದ್ಯದ ಪರಿಸ್ಥಿತಿಯನ್ನು ಗಮನಿಸಿದಾಗ ರಿಯಾಲಿಸ್ಟಿಕ್ ಹೋಗಿ ಕ್ರಿಯೇಟಿವ್ ಅಥವಾ ಹೊಸ ಬಗೆಯ ಈ ರೀತಿಯಾಗಿ ಬಂದಿರುವ ಯುಗದಲ್ಲಿ ಕಲಾವಿದನ ಮನಸ್ಥಿತಿಯಲ್ಲಿರುವ ಭಾವನೆಗಳು ಅವನಲ್ಲಿರುವ ಹೊಸತನವನ್ನು ಮತ್ತು ಒಬ್ಬ ಕಲಾವಿದನು ರಚಿಸುವ ಕಲಾಕೃತಿಗಳಿಗಿಂತ ಮತ್ತೊಬ್ಬರು ರಚಿಸುವ ಕಲಾಕೃತಿಗೂ ಹೋಲಿಕೆ ಮಾಡಿದ್ದಲ್ಲಿ ಒಂದಕ್ಕಿಂತ ಒಂದು ಕಲಾಕೃತಿಯು ಭಿನ್ನವಾಗಿರುತ್ತದೆ. ಹೊಸತನದಿಂದ ಕೂಡಿದ ಊಹಿಸಿಕೊಳ್ಳಲಾದಂತಹ ಭಿತ್ತಿಶಿಲ್ಪಗಳನ್ನು ರಚಿಸುತ್ತಿರುವುದನ್ನು ಕಾಣುತ್ತೇವೆ. ಇಂತಹ ಭಿತ್ತಿಶಿಲ್ಪವನ್ನು ಹೊರಾಂಗಣದಲ್ಲಿ ಅಂದರೆ ಮಳೆ ಬಿಸಿಲು ಬರುವ ಸ್ಥಳಗಳಲ್ಲಿಯೂ ರಚಿಸಬಹುದು. ಹೀಗೆ ರಚಿಸಿದಂತಹ ಕಲಾಕೃತಿಯು ಹಾಳಾಗುವುದಿಲ್ಲ, ಈ ಮಾಧ್ಯಮದಲ್ಲಿ ಕಲಾಕೃತಿಯ ಅಥವಾ ಭಿತ್ತಿಶಿಲ್ಪದ ರಚನೆಯ ನಂತರ ಅದಕ್ಕೆ ಬೇರೆ ಬೇರೆ ರೀತಿಯ ಅಂದರೆ ಸಿಲ್ವರ್‌ಕಾಪರ್, ಸಿಮೆಂಟ್, ಟೆರ್ರಾಕೋಟಾ ರೀತಿಯಾದಂತಹ ಎಫೆಕ್ಟ್‌ಗಳನ್ನು ಫೈಬರ್ ಮಾಧ್ಯಮಕ್ಕೆ ನೀಡಬಹುದು.

### ಉತ್ಸವ (ಜಾತ್ರೆ)

ಭಿತ್ತಿಶಿಲ್ಪವನ್ನು ವೆಂಕಟಚಲಪತಿಯವರಲ್ಲಿ ರಚಿಸಿದ್ದು, ೮x೨೦ ಅಡಿ ಅಳತೆಯನ್ನು ಹೊಂದಿದ್ದು, ಫೈಬರ್ ಮಾಧ್ಯಮದಲ್ಲಿ ೧೯೯೪ರಲ್ಲಿ ರಚಿಸಿದ್ದಾರೆ.

ಭಿತ್ತಿಶಿಲ್ಪದಲ್ಲಿ ಜಾತ್ರಾ ಆಚರಣೆಗೆ ಸಂಬಂಧಿಸಿದಂತೆ ಉತ್ಸವದ ಸಂಯೋಜನೆ ಮಾಡಿದ್ದಾರೆ. ಹಂಪೆಯ ಪರಿಸರಕ್ಕೆ ಸಂಬಂಧಿಸಿದಂತೆ ಹಂಪೆಯ ಉತ್ಸವಕ್ಕೆ ಸಂಬಂಧಿಸಿದಂತೆ ಭಿತ್ತಿಗಳನ್ನು ರಚನೆಮಾಡಿದ್ದಾರೆ. ನರಸಿಂಹನ ಮೂರ್ತಿ ಹಂಪೆಯ ಗೋಪುರ ಅದರ ಮುಂದೆ ಹೋಗುತ್ತಿರುವ ಬರುತ್ತಿರುವ ಜನ, ಅದರ ಪಕ್ಕದಲ್ಲಿ ರಥ, ಆನೆಯ ಮೇಲೆ ಅಂಬಾರಿ ಮಾಡುತ್ತಾ ಅದರ ಹಿಂದೆ ಕುದುರೆಯ ಮೇಲೆ ಹೋರಾಟ ಸೈನಿಕ ಆದ್ದರಿಂದ ಸೈನಿಕರು ಅದರ ಕೆಳಬದಿಯಲ್ಲಿ ನೃತ್ಯ ಮಾಡುವ ಭಜನೆಯ ತಾಳ, ಡೊಳ್ಳು ಹೊಡೆಯುತ್ತಿರುವ ಮತ್ತು ಹೆಣ್ಣುಮಕ್ಕಳ ಪೂಜೆಗೆ ಹೋಗುತ್ತಿರುವುದು ಎಡಭಾಗದಲ್ಲಿ ಮರಕ್ಕೆ ಬುಡದಲ್ಲಿರುವ ನಾಗಪ್ಪನ ಮೂರ್ತಿಗೆ ಪೂಜಿಸಲ್ಲಿಸುತ್ತಿರುವುದು, ಕಹಳೆಯನ್ನು ಊದುತ್ತಿರುವುದು ಮತ್ತು ಆಕಳನ್ನು ತೆಗೆದುಕೊಂಡು ನಡೆಸಿಕೊಂಡು ಹೋಗುತ್ತಿದ್ದಾರೆ. ಇದರ ಎಡಭಾಗದಲ್ಲಿ ಗಂಡು ಮತ್ತು ಹೆಣ್ಣು ಮುಖಗಳನ್ನು ದೊಡ್ಡಗಾತ್ರದಲ್ಲಿ ರಚಿಸಿದ್ದು, ಅತಿ ಸುಂದರವಾಗಿ ರಚನೆಮಾಡಿದ್ದಾರೆ. ಮೂಲೆಯಲ್ಲಿ ಸೂರ್ಯನನ್ನು ರಚಿಸಿರುವುದನ್ನು ಕಾಣುತ್ತೇವೆ. ಈ ಭಿತ್ತಿಶಿಲ್ಪ ರಚನೆ ಮಾಡಿರುವುದರಿಂದ ಅಕ್ಷರ ಗ್ರಂಥಾಲಯಕ್ಕೆ ಕಟ್ಟಡ ಮೆರಗು ಬಂದಂತಾಗಿದೆ.

### ಕಾಫಿ ತೋಟ

ಭಿತ್ತಿಶಿಲ್ಪವನ್ನು ವಿಶ್ವಕರ್ಮಚಾರ್ಯರವರು ೨೦೦೪ರಲ್ಲಿ ರಚಿಸಿದ್ದು, ೧೫x೮ ಅಡಿ ಅಳತೆಯನ್ನು ಹೊಂದಿದ್ದು, ಫೈಬರ್ ಮಾಧ್ಯಮದಲ್ಲಿ ರಚಿಸಿದ್ದಾರೆ.

ಈ ಭಿತ್ತಿಶಿಲ್ಪದಲ್ಲಿ ಮಲೆನಾಡಿನ ಸಂಸ್ಕೃತಿಗೆ ಸಂಬಂಧಿಸಿದ್ದಾಗಿದ್ದು, ಕಾಫಿ ಗಿಡಗಳ ಮಧ್ಯೆ ಒಬ್ಬ ಮಹಿಳೆಯು ಕಾಪಿ ಬೀಜವನ್ನು ಕಿತ್ತುತ್ತಿರುವ, ಮತ್ತೊಂದು ಕೈಯಲ್ಲಿ ಬುಟ್ಟಿಯನ್ನು ನೋಡುತ್ತೇವೆ.ಇಲ್ಲಿ ಸೀರೆಯನ್ನು ಮಹಿಳೆಯು ತಲೆಯ ಮೇಲೆ ಹಾಕಿಕೊಂಡು ರವಿಕೆಯನ್ನು ತೊಟ್ಟಿದ್ದಾಳೆ. ಅದರ ಹಿಂಭಾಗದಲ್ಲಿಒಬ್ಬ ಮಹಿಳೆಯು ಕುಳಿತ್ತಿದ್ದು, ಆಯಾಸವನ್ನು ನೀಗಿಸಿಕೊಳ್ಳುತ್ತಿದ್ದಾರೆ. ಭಿತ್ತಿಚಿತ್ರದ ಎಡಭಾಗದಲ್ಲಿ ಒಬ್ಬ ಪುರುಷ ಮತ್ತೊಬ್ಬ ಮಹಿಳೆಯು ಕುಳಿತ್ತಿದ್ದು, ಮಾತು ಕಥೆಯಲ್ಲಿ ತೊಡಗಿದ್ದಾರೆ. ಹಿಂದೆ ಅನೇಕ ದೊಡ್ಡ ದೊಡ್ಡ ಮರಗಳನ್ನು ಕಾಣುತ್ತೇವೆ. ಆ ಕಾಡಿನಲ್ಲಿ ಜಿಂಕೆಗಳು, ಕಾಡುಕೋಣ, ಆನೆ, ಮಂಗಗಳು ಮುಂತಾದವುಗಳನ್ನು ಕಾಣುತ್ತೇವೆ. ಇಲ್ಲಿ ಹಿಂದೆ ಹೋದಂತೆಲ್ಲಾವೂ ತೆಳುವರ್ಣವನ್ನು ಕಾಣಬಹುದಾಗಿದೆ. ಒಟ್ಟಾರೆಯಾಗಿ ಈ ಭಿತ್ತಿ ಶಿಲ್ಪವು ಅತಿ ಸುಂದರವಾಗಿ ಮೂಡಿಬಂದಿದೆ.

### ಗಣೇಶ

ಭಿತ್ತಿಶಿಲ್ಪವನ್ನು ಜಿ.ಎಸ್.ಶೆಣೈಯವರು ರಚಿಸಿದ್ದು, ಆನಂದರಾವ್ ಸರ್ಕಲ್ ಹತ್ತಿರ ಒಂದು ಕಟ್ಟಡದ ಮೇಲೆ ರಚಿಸಿದ್ದು, ೧೦x೧೫ ಅಡಿ ಅಳತೆ ಇರಬಹುದು ಅಂದಾಜು ಮಾಡಲಾಗಿದೆ.

ಈ ಭಿತ್ತಿಶಿಲ್ಪದಲ್ಲಿ ಗಣೇಶನ ಭಿತ್ತಿಶಿಲ್ಪವನ್ನು ಕಾಣಬಹುದಾಗಿದೆ. ಇಲ್ಲಿ ಗಣಪತಿಯ ಸುತ್ತಲು ವಿವಿಧ ರೀತಿಯ ವಿನ್ಯಾಸಗಳನ್ನು ನಿರ್ಮಿಸಿ ಪ್ರಭಾವಳಿಯಾಗಿ ಮಾಡಿದ್ದಾರೆ. ಎಡ ಮತ್ತು ಬಲಗಡೆಯಲ್ಲಿ ಜನಪದ



ಪೈಬರ್ ಮಾಧ್ಯಮದಲ್ಲಿ ಬಳಸುವ ಪರಿಕರಗಳು



ಪೈಬರ್ ಮಾಧ್ಯಮದಲ್ಲಿ ಬಳಸುವಂತ ಬಣ್ಣಗಳು

ಶೈಲಿಯಲ್ಲಿರುವ ಡೊಳ್ಳನ್ನು ಹೊಡೆಯುತ್ತಿರುವುದನ್ನು ಕಾಣುತ್ತೇವೆ. ಇಲ್ಲಿ ತಲೆಗೆ ದಪ್ಪನೆಯ ಪೇಟಾ ತೊಟ್ಟಿದ್ದು, ಅದರ ಮೇಲೆ ವಿವಿಧ ಅಲಂಕಾರವಾಗಿ ರಚಿಸಿದ್ದಾರೆ. ಇಲ್ಲಿ ತನ್ನ ಎಡಗಾಲನ್ನು ನೆಲಕ್ಕೆ ಊರಿ ಬಲಗಾಲನ್ನು ಮೇಲೆತ್ತಿಕೊಂಡಿದ್ದು ಮಧ್ಯದಲ್ಲಿ ಸೂರ್ಯದೇವನನ್ನು ಚಿತ್ರಿಸಿದ್ದು, ಅದರ ಎಡಭಾಗದಲ್ಲಿ ಪಕ್ಷಿಗಳು ಹಾರಾಡುತ್ತಿರುವುದನ್ನು ಕಾಣುತ್ತೇವೆ. ಎಡ ಮತ್ತು ಬಲಭಾಗದಲ್ಲಿ ವಿವಿಧ ರೀತಿಯ ವಿನ್ಯಾಸಗಳನ್ನು ರಚಿಸಿರುವುದನ್ನು ಕಾಣುತ್ತೇವೆ. ಗಣೇಶನನ್ನು ಹಳದಿ ಮತ್ತು ಹಸಿರು ಮಿಶ್ರಣದಿಂದ ಮಾಡಿದರೆ ಪ್ರಭಾವಳಿಯನ್ನು ಗೋಲ್ಡನ್ ಬಣ್ಣದಿಂದ ರಚನೆ ಮಾಡಿದ್ದಾಳೆ. ಅದರ ಅಕ್ಕಪಕ್ಕದಲ್ಲಿಟೆರ್ರಾಕೋಟಾದ ಎಫೆಕ್ಟನ್ನು ನೀಡಿದ್ದು, ಕೊನೆಯ ಭಾಗದಲ್ಲಿ ಗೋಲ್ಡನ್ ಬಣ್ಣದಿಂದ ಲೇಪಿಸಿದ್ದಾರೆ. ಇವುಗಳ ಹಿಂದೆ ಕಪ್ಪು ಬಣ್ಣದ ಮೈವಳಿಕೆಯನ್ನು ತೆಗೆದಿರುವುದು ಕಂಡುಬರುತ್ತದೆ. ಹಿಂದೆ ಬಿಳಿಯ ಬಣ್ಣದಿಂದ ರಚಿಸಿದ್ದು, ಅದರ ಮೇಲೆ ಕೇಸರಿ ಬಣ್ಣದಿಂದ ಚುಕ್ಕೆಗಳನ್ನು ಅಥವಾ ಹೂಗಳಂತೆ ರಚಿಸಿದ್ದಾರೆ. ಒಟ್ಟಾರೆಯಾಗಿ ಭಿತ್ತಿಶಿಲ್ಪವು ಉತ್ತಮವಾಗಿ ಸಂಯೋಜನೆಗೊಂಡಿದೆ.

### ನಿಸರ್ಗಚಿತ್ರ

ಭಿತ್ತಿಶಿಲ್ಪವನ್ನು ರಮೇಶ ಬಂಡ್ರಿಯವರು ರಚಿಸಿದ್ದು, ೧೦x೮ ಅಡಿ ಇರಬಹುದೆಂದು ಅಂದಾಜು ಮಾಡಲಾಗಿದೆ. ಇದು ಬೆಂಗಳೂರಿನ ಒಂದು ಕಟ್ಟಡದ ಮೇಲೆ ರಚನೆಗೊಂಡಿದೆ.

ಈ ಭಿತ್ತಿಶಿಲ್ಪದಲ್ಲಿ ಪರಿಸರ ಭಿತ್ತಿಶಿಲ್ಪದಲ್ಲಿ ಒಂದು ದೊಡ್ಡ ಆಲದ ಮರ ಅದರಿಂದ ಬೇರಿನ ಬಳ್ಳಿಗಳು ಬಂದಿರುವುದನ್ನು ಕಾಣುತ್ತೇವೆ.ಆಲದ ಮರದ ಬುಡದಲ್ಲಿ ಬೇರೆ ಬೇರೆ ರೆಂಬೆಗಳು ಮರವನ್ನು ಸುತ್ತುವರಿದಿದ್ದು, ಎಲೆಗಳನ್ನು ಅತಿ ಸೂಕ್ಷ್ಮ ರಚಿಸಿರುವಂತೆ ಕಾಣುತ್ತದೆ. ಆದರೆ ಕೆಳಗೆ ಎತ್ತರವಾಗಿ ಬೆಳೆದಂತಹ ಹುಲ್ಲು ದೊಡ್ಡದೊಡ್ಡ ಎಲೆಗಳನ್ನು ಹೊಂದಿದ್ದು, ಉದ್ದವಾಗಿ ರಚನೆ ಮಾಡಿರುವುದನ್ನು ಕಾಣುತ್ತೇವೆ. ಹಿಂಭಾಗದಲ್ಲಿ ಸೂರ್ಯನನ್ನು ರಚಿಸಿದ್ದು, ಅದರ ಮೇಲೆ ಮೋಡಗಳು ಚಲಿಸುತ್ತಿರುವಂತೆ ರಚನೆ ಮಾಡಿದ್ದಾರೆ. ಆಕಾಶವನ್ನು ಮೋಡ ಇರುವ ರೀತಿಯಲ್ಲಿ ರಚನೆ ಮಾಡರುವುದನ್ನು ಕಾಣುತ್ತೇವೆ.ಮರಕ್ಕೆ ಅಂಕು ಡೊಂಕಾಗಿ ಹೋಗಿರುವಂತೆ ಬಳ್ಳಿಗಳ ಎಲೆಗಳನ್ನು ಅತಿ ಸೂಕ್ಷ್ಮವಾಗಿ ರಚನೆ ಮಾಡಿರುವುದನ್ನು ಕಾಣುತ್ತೇವೆ.

### ಆಲದ ಮರ

ಭಿತ್ತಿಶಿಲ್ಪವನ್ನು ಮೊಂಗಲಿ ಎಂಬುವವರು ೨೦೧೧ರಲ್ಲಿ ರಚಿಸಿದ್ದು, ಮೈಸೂರಿನ ಒಂದು ಮನೆಯ ಒಳಗೋಡೆಯ ಮೇಲೆ ರಚಿಸಿದ್ದು, ೧೦x೧೫ ಅಡಿ ಅಳತೆಯನ್ನು ಹೊಂದಿದೆ.

ಭಿತ್ತಿಶಿಲ್ಪದಲ್ಲಿ ಆಲದ ಮರವನ್ನು ಕಾಣಬಹುದು. ಇದರಲ್ಲಿ ಮೊದಲು ಆಲದ ಮರದ ಕೆಳಗೆ ಕಲ್ಲುಗಳ ಗುಂಡುಗಳನ್ನು ಜೋಡಿಸಿದಾಗ ಫೈಬರ್ ಮಾಧ್ಯಮದಲ್ಲಿರಚಿಸಿದ್ದು, ಆಲದ ಮರದ ಬುಡವನ್ನು ಹಳ್ಳದಿನ್ನೆಗಳಿಂದ ರಚಿಸಿಲಾಗಿದೆ. ರೆಂಬೆ ಕೊಂಬೆಗಳನ್ನು ಸಹ ಕಾಣಬಹುದಾಗಿದೆ. ದೊಡ್ಡದಾದ ಮೇಲೆ ಹಗಲವಾಗಿ ರೆಂಬೆ ಕೊಂಬೆಗಳು ವಿಸ್ತರಣೆಗೊಂಡು ಆದ್ದರಿಂದ ಆಲದ ಮರದ ಬೇರುಗಳು ನೆಲಕ್ಕೆ ಬಂದು

ಭೂಮಿಯೊಳಗೆ ಹೋಗಿರುವುದರಿಂದ ಕಾಣುತ್ತೇವೆ. ಮತ್ತು ಎಲೆಗಳು ಅಸ್ಪಷ್ಟವಾಗಿ ಕಂಡರೂ ಸಹ ಎಲೆಗಳ ಆಕಾರದಲ್ಲಿ ಕಾಣುವಂತೆ ತೋರುತ್ತವೆ. ಇಲ್ಲಿ ಗೋಲ್ಡ್ ಎಫೆಕ್ಟ್ ಅನ್ನು ನೀಡಲಾಗಿದೆ. ಇದರ ಹಿಂದಿನ ಭಾಗದಲ್ಲಿ ಹಸಿರುಬಣ್ಣದ ಲೇಪನವನ್ನು ಮಾಡಿದಕ್ಕೆ ಆ ಭಿತ್ತಿಶಿಲ್ಪದ ಸೌಂದರ್ಯತೆ ಹೆಚ್ಚಾಗಿ ಕಾಣುತ್ತದೆ. ಆಧುನಿಕ ಕಲಾವಿದರು ಅನೇಕ ಈ ರೀತಿ ಸಂಯೋಜನೆಗಳನ್ನು ಮಾಡಿ, ಫೈಬರ್ ಮಾಧ್ಯಮವನ್ನು ಹೆಚ್ಚಾಗಿ ಬಳಸುತ್ತಿರುವುದನ್ನು ಕಾಣಬಹುದು.

## ಹಿಂದೂ ಧಾರ್ಮಿಕ ಆಚರಣೆ

ಭಿತ್ತಿಶಿಲ್ಪವನ್ನು ಪರಶುರಾಮ ಮತ್ತು ಅವರ ಸಹಾಯಕರು ಗುಲ್ಬರ್ಗಾದಲ್ಲಿ ರಚಿಸಿದ್ದಾರೆ.

ಈ ಭಿತ್ತಿಶಿಲ್ಪದಲ್ಲಿ ಓಂ ಎಂಬ ಚಿಹ್ನೆ ಇದು ಹಿಂದೂ ಧರ್ಮವನ್ನು ಎತ್ತಿಹಿಡಿಯುತ್ತದೆ. ಅದರ ಪಕ್ಕದಲ್ಲಿ ಫೈಬರ್ ಮಾಧ್ಯಮದಿಂದ ಮೈವಳಿಕೆಗಳನ್ನು ತೆಗೆದಿರುವುದನ್ನು ಕಾಣುತ್ತೇವೆ. ಕೆಳಭಾಗದಲ್ಲಿ ಅಲೆಗಳಂತೆ ರಚಿಸಿದ್ದು, ತ್ರಿಭುಜ ಮತ್ತು ಚೌಕಾಕಾರವಾಗಿ ರಚಿಸಿದ್ದಾರೆ. ಭಿತ್ತಿಶಿಲ್ಪದ ಎಡಭಾಗದಲ್ಲಿಒಂದು ಲಿಂಗವಿದ್ದು, ಅದರ ಮೇಲೆ ಮೂರು ನಾಮಗಳನ್ನು ಕೊರೆದಿರುವಂತೆ ರಚಿಸಿದ್ದು, ಅದರ ಮೇಲಿನ ವಿನ್ಯಾಸ ತ್ರಿಶೂಲದಂತೆ ಕಾಣುತ್ತದೆ. ಅದರ ಹಿಂಭಾಗದಲ್ಲಿ ಮೈವಳಿಕೆಯನ್ನು ತೆಗೆದು ಅದರ ಮೇಲೆ ಚುಕ್ಕೆಚುಕ್ಕೆಯ ಮೈವಳಿಕೆಯನ್ನು ತೆಗೆದಿದ್ದಾಗಿದೆ. ಬಲಭಾಗದಲ್ಲಿ ಸೂರ್ಯನನ್ನು ರಚಿಸಿ ಅದಕ್ಕೆ ಕಣ್ಣು, ಮೂಗು, ಬಾಯಿಯನ್ನು ರಚಿಸಿದ್ದು, ಅದರ ಮೇಲೆ ವರ್ತುಲ ರೀತಿಯಲ್ಲಿ ಕೆಳಗೆ ಮತ್ತು ಪಕ್ಕದಲ್ಲಿ ರಚಿಸಿದ್ದಾರೆ. ಅದರ ಕೆಳಗೆ ನಮಸ್ಕರಿಸುತ್ತಿರುವ ಕೈಗಳು ಮಾತ್ರ ಕಾಣಿಸುತ್ತವೆ. ಕೆಳಭಾಗದಲ್ಲಿ ವೃತ್ತಾಕಾರದ ಬುಟ್ಟಿಯಂತಿದ್ದು, ಅದರ ಒಳಗೆ ಗೆರೆಗಳು ಎಳೆದಿರುವುದನ್ನು ಕಾಣುತ್ತೇವೆ. ಭಿತ್ತಿಶಿಲ್ಪದ ಅಂಚುಗಳಲ್ಲಿ ವೃತ್ತಾಕಾರದ ವಿನ್ಯಾಸಗಳನ್ನು ರಚಿಸಿರುವುದನ್ನು ಕಾಣಬಹುದು. ಇದಕ್ಕೆ ಬಂಗಾರದ ಹೊಳಪನ್ನು ನೀಡಿದ್ದು ಸುಂದರವಾಗಿ ಕಾಣಿಸುತ್ತದೆ.

## ಯಕ್ಷಗಾನದ ಸನ್ನಿವೇಶ

ಭಿತ್ತಿಶಿಲ್ಪವನ್ನು ವೆಂಕಟಚಲಪತಿಯವರು ೨೦೧೦ರಲ್ಲಿ ರಚಿಸಿದ್ದು, ಅವರ ಸ್ಟೂಡಿಯೋದಲ್ಲಿದ್ದು ೪x೧೫ ಅಡಿ ಅಳತೆಯನ್ನು ಹೊಂದಿದ್ದು, ಫೈಬರ್ ಮಾಧ್ಯಮದಿಂದ ರಚಿಸಿದ್ದಾರೆ.

ಈ ಭಿತ್ತಿಶಿಲ್ಪದಲ್ಲಿ ಯಕ್ಷಗಾನಕ್ಕೆ ಸಂಬಂಧಿಸಿದಂತೆ ರಚಿಸಿದ್ದು, ಭಿತ್ತಿಶಿಲ್ಪದ ಎಡಭಾಗದಲ್ಲಿ ವೇಶವನ್ನು ಧರಿಸಿ ಬಿಲ್ಲುಬಾಣವನ್ನು ಹಿಡಿದಿದ್ದು, ಮತ್ತೊಬ್ಬ ಯುವಕ ತನ್ನ ಮೊಣಕಾಲನ್ನು ನೆಲಕ್ಕೆ ಊರಿ ಬಿಲ್ಲುಬಾಣಗಳನ್ನು ಹಿಡಿದಿರುವುದು ಕಾಣುತ್ತೇವೆ. ಅದರ ಪಕ್ಕದಲ್ಲಿ ಒಬ್ಬ ಬೆಂಕಿಯ ಪಂಜನ್ನು ಹಿಡಿದು ನಿಂತಿರುವ ಇಬ್ಬರು ದೊಡ್ಡ ದೊಡ್ಡದಾದ ಮುಖವಾಡಗಳನ್ನು ಹಾಕಿಕೊಂಡು ತನ್ನ ಕೈಗಳಲ್ಲಿ ಕತ್ತಿಯನ್ನು ಹಿಡಿದುಕೊಂಡು ಮತ್ತೊಂದು ಕೈಯಲ್ಲಿ ಗುರಾಣಿಯನ್ನು ಹಿಡಿದಿರುವುದನ್ನು ಕಾಣುತ್ತೇವೆ. ಅದರ ಪಕ್ಕದಲ್ಲಿ ಒಬ್ಬ ತಮಟೆಯನ್ನು ಹಿಡಿದು ಹೊಡೆಯುತ್ತಿರುವುದನ್ನು ಕಾಣುತ್ತೇವೆ. ಅವನ ಮುಂದೆ ಬೆಂಕಿಯು



ಆಲದ ಮರ



ಹಿಂದೂ ಧಾರ್ಮಿಕ ಆಚರಣೆ



ಯಕ್ಷಗಾನದ ಸನ್ನಿವೇಶ

ಉರಿಯುತ್ತಿರುವುದನ್ನು ಕಾಣುತ್ತೇವೆ. ಅದರ ಪಕ್ಕದಲ್ಲಿ ಒಬ್ಬ ಡೊಳ್ಳನ್ನು ಹಿಡಿದು ಹೊಡೆಯುತ್ತಿರುವುದನ್ನು ಕಲಾವಿದರು ಸ್ಪಷ್ಟವಾಗಿ ಮತ್ತು ಸುಂದರವಾಗಿ ರಚಿಸಿದ್ದಾರೆ.

**ಪರಿಸರ**

ಭಿತ್ತಿಶಿಲ್ಪವನ್ನು ರಮೇಶ್ ಬಂಡ್ರಿಯವರು ೨೦೦೯ರಲ್ಲಿ ಬೆಂಗಳೂರಿನ ಅವರ ಸ್ಟೂಡಿಯೋ ರಚಿಸಿದ್ದು, ೮x೧೦ ಅಳತೆಯನ್ನು ಹೊಂದಿದ್ದು ಫೈಬರ್ ಮಾಧ್ಯಮದಲ್ಲಿ ರಚಿಸಿದ್ದಾರೆ.

ಭಿತ್ತಿಶಿಲ್ಪದಲ್ಲಿ ಸೂರ್ಯವನ್ನು ದೊಡ್ಡದಾಗಿ ಚಿತ್ರಿಸಿದ್ದು, ಅದಕ್ಕೆ ವೃತ್ತಾಕಾರದ ವಿನ್ಯಾಸವನ್ನು ರಚಿಸಿದ್ದು, ನೇರ ಕಿರಣಗಳು ಹೋದಂತೆ ರಚಿಸಿದ್ದಾರೆ. ಇದಕ್ಕೆ ಬಂಗಾರದ ಲೇಪನವನ್ನು ಮಾಡಿದ್ದು ಅದರ ಕೆಳಭಾಗದಲ್ಲಿ ಸುರುಳಿಯ ರೂಪದ ವಿನ್ಯಾಸವನ್ನು ಕಾಣುತ್ತೇವೆ. ಅದರ ಕೆಳಗೆ ಎಲೆ ಆಕಾರದಲ್ಲಿ ದೊಡ್ಡದಾಗಿ ರಚಿಸಿದ್ದು, ಅದರ ಪಕ್ಕದಲ್ಲಿ ವಿವಿಧ ರೂಪದ ಮೈವಳಿಕೆಯನ್ನು ರಚಿಸಿದ್ದು, ತಮ್ಮದೇ ಆದ ಒಂದು ಹೊಸ ಶೈಲಿಯಲ್ಲಿ ಎರಡು ಮಾನವಾಕೃತಿಗಳನ್ನು ರಚಿಸಿರುವುದನ್ನು ಕಾಣುತ್ತೇವೆ. ತಲೆಯನ್ನು ವೃತ್ತಾಕಾರವಾಗಿ ರಚಿಸಿದ್ದು ದೇಹವನ್ನು ಆಯುತಕಾರಕ್ಕೆ ಹೋಲಿಕೆಯಾಗುವಂತೆ ರಚಿಸಿದ್ದಾರೆ. ಇಲ್ಲಿ 'ಯು' ಕಾರವಾಗಿ ಚಿತ್ರಿಸಿದ ಅದಕ್ಕೆ ನೆರಳು ಬೆಳಕಿನ ಎಫೆಕ್ಟನ್ನು ನೀಡಿದ್ದಾರೆ. ಮೇಲಿನ ಭಾಗದಲ್ಲಿ ತ್ರಿಭುಜಾಕಾರದಿಂದ ಕೂಡಿರುವುದರ ಮೇಲೆ ವೃತ್ತಾಕಾರವನ್ನು ಕೆಳಗಿನ ಭಾಗಕ್ಕಿಂತ ತೆಳುವಾದ ಬಣ್ಣವನ್ನು ಹಚ್ಚಿದ್ದು ಹಿಂದಿನ ಭಾಗಕ್ಕೆ ದಪ್ಪವಾದ ಬಣ್ಣವನ್ನು ಲೇಪಿಸಿದ್ದಾರೆ. ಹೊರಗಿನ ಭಾಗವನ್ನು ಚೌಕಾಕಾರವಾಗಿ ರಚಿಸಿರುವುದನ್ನು ಕಾಣುತ್ತೇವೆ.

**ದೇಶದ ಸಂಸ್ಕೃತಿ**

ವೆಂಕಟಚಲಪತಿಯವರು ರಚಿಸಿರುವ ಈ ಭಿತ್ತಿಶಿಲ್ಪವು ಕನ್ನಡ ವಿಶ್ವವಿದ್ಯಾಲಯ ಕ್ರಿಯಾಶಕ್ತಿಯಲ್ಲಿರುವ ಸಹಾಯಕ ಕುಲಸಚಿವರ ಕಚೇರಿಯಲ್ಲಿದ್ದು, ೬x೪ ಅಳತೆಯನ್ನು ಹೊಂದಿದ್ದು ಫೈಬರ್ ಮಾಧ್ಯಮದಿಂದ ರಚಿಸಿದ್ದಾರೆ.

ಈ ಭಿತ್ತಿಶಿಲ್ಪದ ಎಡಬದಿಯಲ್ಲಿ ಎರಡು ಮರಗಳು ಒಂದು ಜಿಂಕೆಯನ್ನು ಕಾಣಬಹುದು ಅದರ ಪಕ್ಕದಲ್ಲಿ ಒಂದು ಚಿಕ್ಕ ಗುಡಿಸಲು ಆ ಗುಡಿಸಲಿನ ಮುಂದೆ ಒಬ್ಬ ಸ್ತ್ರೀಯು ನಿಂತಿದ್ದು, ಅದರ ಪಕ್ಕದಲ್ಲಿ ಜವಾಹರಲಾಲ್ ನೆಹರುರವರು ಪುಟ್ಟ ಹುಡುಗರ ಕೈಯಿಂದ ಗುಲಾಬಿಯನ್ನು ಪಡೆಯುತ್ತಿರುವುದನ್ನು ಮನಮೋಹಕವಾಗಿ ರಚಿಸಿದ್ದಾರೆ. ಅದರ ಪಕ್ಕದಲ್ಲಿ ದೇವಾಲಯವಿದ್ದು, ಭಿತ್ತಿಶಿಲ್ಪದ ಎಡಭಾಗದಲ್ಲಿ ಅಶೋಕಚಕ್ರವನ್ನು ರಚಿಸಿದ್ದು, ಅದರ ಕೆಳಭಾಗದಲ್ಲಿ ನಮ್ಮ ದೇಶದ ಸೈನಿಕ ಮತ್ತು ಅವನು ಉಪಯೋಗಿಸುವ ಯಂತ್ರವನ್ನು ಕಾಣುತ್ತೇವೆ. ಅದರ ಪಕ್ಕದಲ್ಲಿ ಒಂದು ಮರವಿದ್ದು. ಒಬ್ಬ ವೀಣೆಯನ್ನು ಹಿಡಿದು ಪಿಟೀಲನ್ನು ಬಾರಿಸುತ್ತಿರುವುದನ್ನು ಕಾಣುತ್ತೇವೆ. ಬಲಗಡೆ ವನವನ್ನು ಪಕ್ಷಿಗಳು ಹಾರುತ್ತಿರುವುದನ್ನು ರಚಿಸಿದ್ದಾರೆ. ಅದರ ಕೆಳಭಾಗದಲ್ಲಿ ನೀರು ಹರಿಯುವಂತೆ ರಚಿಸಿದ್ದಾರೆ. ಒಟ್ಟಾರೆಯಾಗಿ ನಮ್ಮ ದೇಶದ ಸಂಸ್ಕೃತಿಯನ್ನು ನೆನಪಿಸುತ್ತದೆ. ಹಿಂಬದಿಯಲ್ಲಿ ಕೆಂಪುಬಣ್ಣದಿಂದ ಲೇಪನ ಮಾಡಿದ್ದಾರೆ.

ಅನ್ ಟೈಟಲ್

ಭಿತ್ತಿಶಿಲ್ಪವನ್ನು ರಚಿಸಿದ್ದು, ಇದು ೮x೧೫ ಅಡಿ ಅಳತೆಯನ್ನು ಹೊಂದಿದ್ದು, ಫೈಬರ್ ಮಾಧ್ಯಮದಿಂದ ರಚಿಸಿದ್ದಾರೆ.

ಭಿತ್ತಿಶಿಲ್ಪದ ಮೇಲಿನ ಭಾಗದಲ್ಲಿ ಸೂರ್ಯನ ಆಕಾರವನ್ನು ಹೊಂದಿದ್ದು, ಅದರ ಪಕ್ಕದಲ್ಲಿ ಚಂದ್ರ, ನಕ್ಷತ್ರ ಮತ್ತು ಗ್ರಹಗಳಿರುವಂತೆ ರಚಿಸಿದ್ದಾರೆ. ಗ್ರಹವನ್ನು ವೃತ್ತಾಕಾರವಾಗಿ ರಚಿಸಿ ಅದರ ಮೇಲೆ ಅರ್ಧ ವೃತ್ತಾಕಾರವಾಗಿ ರಚಿಸಿ ಅದರ ಮೇಲೆ ವೃತ್ತಾಕಾರವಾಗಿ ರಚಿಸಿ ಅದರ ಮೇಲೆ ಅರ್ಧ ವೃತ್ತಾಕಾರವನ್ನು ಹಾಕಿದ್ದು, ಅನೇಕ ನಕ್ಷತ್ರಗಳನ್ನು ರಚಿಸಿದ್ದಾರೆ. ಆದರೆ ಮೇಲ್ಭಾಗದಲ್ಲಿ ಮೋಡಗಳಂತೆ ರಚಿಸಿದ್ದಾರೆ. ಮಧ್ಯಭಾಗದಲ್ಲಿ ಬಿರುಸಾಗಿ ಬೀಸುವ ಗಾಳಿಯಂತೆ ರಚಿಸಿದ್ದು, ಅದರ ಕೆಳಭಾಗದಲ್ಲಿ ಎಲೆ, ಗುಡ್ಡ ಮತ್ತು ಒಂದು ಕಲ್ಲಿನ ಮೇಲೆ ದೀಪ ಉರಿಯುತ್ತಿರುವಂತೆ ರಚಿಸಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಈ ಭಿತ್ತಿಶಿಲ್ಪವು ನೋಡುಗರನ್ನು ಆಕರ್ಷಿಸುತ್ತದೆ. ಮತ್ತು ಮನೆಯ ಸೌಂದರ್ಯವನ್ನು ಹೆಚ್ಚಿಸುವಂತೆ ಕಾಪಾಡುತ್ತದೆ. ಒಟ್ಟಾರೆಯಾಗಿ ಈ ಸಂಯೋಜನೆಯ ಸರಳವಾಗಿದ್ದರೂ ಅದರಲ್ಲಿ ಕಂಡುಬರುವ ವಸ್ತುವಿಷಯವು ಹೆಚ್ಚು ಅಂಶಗಳನ್ನು ಒಳಗೊಂಡಿದೆ.

ಲಲಿತಕಲೆಗಳು

ಭಿತ್ತಿಶಿಲ್ಪವನ್ನು ೨೦೦೬ರಲ್ಲಿ ರಚಿಸಿದ್ದು, ೧೫x೨೦ ಅಡಿ ಅಳತೆಯನ್ನು ಹೊಂದಿದು, ಬೆಂಗಳೂರಿನ ಕಲಾಸೌಧ ಕಟ್ಟಡದ ಮೇಲೆ ರಮೇಶ್ ಬಂಡ್ರಿಯವರು ಪೈಬರ್ ಮಾಧ್ಯಮದಿಂದ ರಚಿಸಿದ್ದಾರೆ.

ಈ ಭಿತ್ತಿಶಿಲ್ಪದಲ್ಲಿ ಲಲಿತಕಲೆಗಳಿಗೆ ಸಂಬಂಧಿಸಿದಂತೆ ಎಲ್ಲಾವನ್ನು ಈ ಶಿಲ್ಪದಲ್ಲಿ ಸಂಯೋಜಿಸಿರುವುದನ್ನು ಕಾಣುತ್ತೇವೆ. ಸಂಗೀತಕ್ಕೆ ಸಂಬಂಧಿಸಿದಂತೆ, ತಬಲ, ವೀಣೆ, ತಂಬೂರು, ಪೀಯಾನ್ ಪೆಟ್ಟಿಗೆ ಹಾರ್ಮ್ಯೂನಿಯಮ್ ಹೀಗೆ ಮುಂತಾದ ಸಂಗೀತ ಸಾಮಾಗ್ರಿಗಳನ್ನು ಉತ್ತಮವಾಗಿ ಸಂಯೋಜನೆ ಮಾಡಿದ್ದಾರೆ. ಅದೇ ರೀತಿಯಾಗಿ ನಾಟಕಕ್ಕೆ ಸಂಬಂಧಿಸಿದಂತೆ ಮುಖವಾಡಗಳು ಮತ್ತು ಪರದೆಗಳನ್ನು ತೋರಿಸಿದ್ದಾರೆ. ಅದರ ಕೆಳಭಾಗದಲ್ಲಿ ಕ್ಯಾಮಾರಕ್ಕೆ ಬಳಸುವ ರೀಲ್‌ನ ಆಕಾರ ಹೋಲುವಂತೆ ಶಿಲ್ಪಕೃತಿಯನ್ನು ರಚಿಸಿದ್ದು ಅದರ ಮೇಲಿನ ಭಾಗದಲ್ಲಿಒಂದು ದೀಪ ಉರಿಯುತ್ತಿರುವಂತೆ ರಚಿಸಿದ್ದಾರೆ. ಇದು ಹಿಂದೂ ಸಾಂಪ್ರದಾಯಕ್ಕೆ ಸಂಬಂಧಿಸಿದಂತಾಗಿದೆ. ಮಧ್ಯಭಾಗದಲ್ಲಿ ಸೂರ್ಯನನ್ನು ಕಾಣುತ್ತೇವೆ. ಯಾವುದೇ ಒಂದು ಕಾರ್ಯಕ್ರಮವನ್ನು ಉದ್ಘಾಟನೆ ಮಾಡುವ ಸಂದರ್ಭದಲ್ಲಿದೀಪ ಹಚ್ಚುವುದರಿಂದ ಪ್ರಾರಂಭಿಸುತ್ತಾರೆ. ಯಾವುದೇ ಕಾರ್ಯ ಮಾಡಬೇಕಾದರೆ ಬೆಳಕು ಮುಖ್ಯವಾಗಿ ಬೇಕಾಗುತ್ತದೆ. ಅದರ ಎಡಭಾಗದಲ್ಲಿ ಪಕ್ಷಿಗಳು ಹಾರುತ್ತಿರುವುದನ್ನು ನೋಡುತ್ತೇವೆ. ಅದರ ಕೆಳಭಾಗದಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಪುಸ್ತಕ ಲೇಖನಿಗಳು ದೊಡ್ಡ ಗಾತ್ರದ ಕಾದಂಬರಿಗಳಿರುವಂತೆ ರಚಿಸಿದ್ದಾರೆ. ಚಿತ್ರಕಲಾವಿದನು ತನ್ನ ಜೀವನವನ್ನು ರೂಪಿಸಿಕೊಳ್ಳಬೇಕಾದರೆ ಮುಖ್ಯವಾಗಿ ಇಲ್ಲಿ ಪ್ಯಾಲೇಟ್ ಮತ್ತು ಕುಂಚವನ್ನು ರಚಿಸಿದ್ದು, ಅತಿ ರಮ್ಯತೆಯಿಂದ ಕಾಣುತ್ತದೆ. ಅದರ ಮೇಲ್ಭಾಗದಲ್ಲಿ ನಾಲ್ಕು ಮಾನಾವಾಕೃತಿಗಳನ್ನು ಹೋಲುವ ಹಾಗೆ ರಚಿಸಿದ್ದಾರೆ. ಅದು

ನಾವು ಎಲ್ಲರೂ ಒಂದೇ ಎಂಬ ಭಾವನೆಯನ್ನು ಸೃಷ್ಟಿಸುತ್ತದೆ. ಈ ಕಲಾಕೃತಿಯಲ್ಲಿ ಲಲಿತಕಲೆಗಳ ಬಗ್ಗೆತಿಳಿಸಿಕೊಡುತ್ತದೆ.

ಪರಿಸರ

ಭಿತ್ತಿಶಿಲ್ಪವನ್ನು ೨೦೦೬ರಲ್ಲಿ ರಚಿಸಿದ್ದು, ೧೦x೧೫ ಅಡಿಗಳಷ್ಟು ವಿಸ್ತಾರವಾಗಿದ್ದು, ಬೆಂಗಳೂರಿನ ಕಲಾಸೌಧದ ಮುಂಭಾಗದಲ್ಲಿ ರಮೇಶ ಬಂಡ್ರಿಯವರು ಫೈಬರ್ ಮಾಧ್ಯಮದಿಂದ ರಚಿಸಿದ್ದಾರೆ. ಈ ಭಿತ್ತಿಶಿಲ್ಪದ ಪರಿಸರಕ್ಕೆ ಸಿಗುವಂತಹ ಎಲೆ, ಹೂವು, ಬಳ್ಳಿ, ಪಕ್ಷಿ ಸೂರ್ಯವನ್ನು ಉಪಯೋಗಿಸಿಕೊಂಡು ಸಂಯೋಜನೆ ಮಾಡಿದ್ದಾರೆ. ಈ ಶಿಲ್ಪದಲ್ಲಿ ಸೂರ್ಯವನ್ನು ಕಲಾವಿದನ ಮನಸ್ಸಿನ ಭಾವನೆಗೆ ಬಂದಹಾಗೆ ಚಿತ್ರಿಸಿದ್ದು, ಅದರ ಮೇಲೆ ಕಿರಣಗಳನ್ನು ಸಹ ರಚಿಸಿರುವುದನ್ನು ಕಾಣುತ್ತೇವೆ. ಎಡಭಾಗದಲ್ಲಿ ಸುರಿಯುತ್ತಿರುವ ನೀರಿನ ಹನಿ ಅದರ ಪಕ್ಕದಲ್ಲಿ ಗುಡ್ಡಗಳು ಮತ್ತು ಅದರ ಮುಂದೆ ನಕ್ಷತ್ರಗಳನ್ನು ರಚಿಸಿದ್ದಾರೆ. ಶಿಲ್ಪದ ಬಲಭಾಗದಲ್ಲಿ ಹಾರುತ್ತಿರುವ ಎರಡು ಪಕ್ಷಿಗಳನ್ನು ರಚಿಸಿದ್ದು, ಅದರ ಕೆಳಗೆ ಹೂವುಗಳು ಮೊಗ್ಗು, ಎಲೆಗಳನ್ನು ರಚಿಸಿ ಅದರ ಹೊರ ರೇಖೆಗಳು ಕಾಣುವ ರೀತಿಯಲ್ಲಿ ಸಂಯೋಜನೆ ಮಾಡಿದ್ದಾರೆ. ಈ ಭಿತ್ತಿ ಶಿಲ್ಪಾಕೃತಿಯಲ್ಲಿ ಅಲ್ಲಲ್ಲಿ ವೃತ್ತಾಕಾರವಾಗಿ ರಚಿಸಿದ್ದು, ಖಾಲಿಯಾಗಿರುವ ಭಾಗವನ್ನು ತುಂಬಿಕೊಂಡಿರುವ ಹಾಗೆ ಕಾಣಿಸುತ್ತದೆ. ನೀರಿನ ಮೇಲೆ ಕಮಲದ ಹೂವುಗಳು ಬೆಳೆದಿರುವುದನ್ನು ಕಾಣುತ್ತೇವೆ. ನೀರಿನ ಅಲೆಗಳಿರುವಂತೆ ಈ ಟೆರ್ರಾಕೋಟಾ ಮಾಧ್ಯದಲ್ಲಿ ಚಿತ್ರ ರಚನೆ ಮಾಡಿದ್ದಾರೆ.

ಫೈಬರ್ ರಚನಾ ವಿಧಾನ

ಫೈಬರ್ ಮಾಧ್ಯಮವನ್ನು ರಚಿಸುವಾಗ ಮೊದಲಿಗೆ ಕರುಡು ಚಿತ್ರವನ್ನು ರಚಿಸಿಕೊಂಡು ಅದರಲ್ಲಿರುವಂತೆ ಮಣ್ಣಿನಿಂದ ರಚಿಸಿಕೊಳ್ಳಬೇಕು. ಆ ಮಣ್ಣು ಹೆಚ್ಚು ಅಂಟಂಟಾಗಿ ಇರಬಾರದು ನೀರಿನಾಂಶ ಕಡಿಮೆ ಇರಬೇಕು, ಇದರ ಹಿಂದೆ ಕಬ್ಬಿಣ ಸಲಾಕೆಗಳನ್ನು ಹಾಕಬೇಕು. ಫಿಗರ್ ಮಾಡಿಕೊಳ್ಳಬೇಕು. ಅದನ್ನು ಬಿಡಿಭಾಗಗಳನ್ನು ಮಣ್ಣಿನಿಂದ ಮಾಡಿಕೊಂಡು ಎರಡು ಮೋಲ್ಡ್‌ಗಳನ್ನು ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ತೆಗೆಯಬೇಕು. ತೆಗೆದ ನಂತರ ಬಿರುಕಬಿಟ್ಟಿದಂತಹ ಜಾಗಕ್ಕೆ ಫೇಸ್ಟ್ ಮಾಡಬೇಕು. ನಂತರದಲ್ಲಿ ೧೦೦ ಎಂ.ಎಲ್ ರೆಜನ್ ತೆಗೆದುಕೊಂಡು ಅದಕ್ಕೆ ಆಕ್ಸಾಲೇಟರ್ ೩ ಅಥವಾ ೫ ಎಂ.ಎಲ್ ಮಿಕ್ಸ್ ಮಾಡಬೇಕು. ಅದಕ್ಕೆ ೧೦ ಚಾಕ್‌ಪೌಡರನ್ನು ಸೇರಿಸಿ ಗಟ್ಟಿ ಮಾಡದಂತೆ ಮಾಡಿ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ತೆಗೆದ ಮೋಲ್ಡ್‌ಗೆ ಲೇಪಿಸಬೇಕು. ಚಾಕ್‌ಪುಡಿ ಮ್ಯಾಟನ್ ಚೂರುಗಳನ್ನು ಕತ್ತರಿಸಿ ಹಚ್ಚಬೇಕು. ಅದು ಎಲ್ಲಾ ಭಾಗಗಳನ್ನು ಮುಚ್ಚುವ ತನಕ ಚೂರುಗಳನ್ನು ಹಚ್ಚಿದ ಮೇಲೆ ೨ ಲೇಯರ್ ೩ ಲೇಯರ್ ವಾಕ್ಸ್‌ಫುಲ್ ಮತ್ತು ಸೀಮೆ ಎಣ್ಣೆಯನ್ನು ಸೇರಿಸಿ ಲೇಪಿಸಬೇಕು. ಜಲ್‌ಕೋಟ್‌ಗೆ ಕೆಟಲಿಸ್ಟ್ ೧೦ ತಿನ್ ಮಾಡಿಕೊಂಡು ಅದಕ್ಕೆ ತಿಕ್‌ಆಗಿ ವಾಶ್ ಮಾಡಬೇಕು. ಈ ರೀತಿ ವಾಶ್ ಮಾಡಿದ ಮೇಲೆ ೩ ಎಂ.ಎಂ ದಪ್ಪವಾಗುತ್ತದೆ. ಈ ರೀತಿ ಮಾಡಿದ ನಂತರ ೩೦ ಅಥವಾ ೪೫ ನಿಮಿಷಗಳ ಕಾಲಬಿಟ್ಟು ಮೋಲ್ಡ್ ತೆಗೆಯಬೇಕು ಮತ್ತು ಎಡ್ಜ್‌ಗಳನ್ನು ಅದರ ಮಟ್ಟಕ್ಕೆ ಸಮಮಾಡಿಕೊಂಡ ನಂತರ ನಮಗೆ ಬೇಡವಾದ ಭಾಗಗಳನ್ನು ಪಾಲಿಶ್

ಪೇಪರ್‌ನಿಂದ ತೆಗೆದು ಕೆಲವೊಮ್ಮೆ ನಮ್ಮ ಬೇಡವಾದ ಭಾಗಗಳನ್ನು ಕತ್ತರಿಸಿ ತೆಗೆಯಬೇಕು. ನಂತರದಲ್ಲಿ ನೀರಿನಿಂದ ತೊಳೆದು ಒಣಗಿದ ನಂತರ ಪ್ರೈಮರ್ ಒಂದು ಸಾರಿ ಲೇಪನ ಮಾಡಿದ ಮೇಲೆ ನಮಗೆ ಬೇಕಾಗುವ ಬಣ್ಣಗಳನ್ನು ಆಯ್ಕೆಮಾಡಿಕೊಂಡು ಫೈಬರ್ ಮಾಧ್ಯಮ ಭಿತ್ತಿ ಶಿಲ್ಪಕ್ಕೆ ಲೇಪಿಸಬೇಕು ಎಂದು ವೆಂಕಟಚಲಪತಿಯವರು ಹೇಳಿದ್ದಾರೆ. ಬಳಸುವ ಪರಿಕರಗಳು:- ಜಿ.ಪಿ.ರಜಿನ್, ಅಕ್ಸಿಲೇಟರ್, ಕೇಟಾಲಿಸ್ಟ್, ವಾಕ್ಸ್‌ಪೆಲೋ, ಟೀನರ್, ೧.೨.ನಂಬರಿನ ಕುಂಚಗಳ, ಚಾಕ್‌ಪೌಡರ್, ಚಾಪ್‌ಪುಡಿ, ಮ್ಯಾಟ್, ಪ್ಲಾಸ್ಟಿಕ್ ಬೋಲೆ ಇತ್ಯಾದಿ.

## ಮರ ಮಾಧ್ಯಮ

ಮರದ ಮಾಧ್ಯಮವನ್ನು ಮೊದಲು ಈಜಿಪ್ಟಿಯನ್ನರು ಕ್ರಿ.ಪೂ.೨ನೇ ಶತಮಾನದ ಹಿಂದೆಯೇ ಗಾರೆ ಲೇಪಿಸಿದ ಗೋಡೆಯ ಮೇಲೆ ಮಾತ್ರವಲ್ಲದೇ ಕಲ್ಲು ಚಪ್ಪಡಿ, ಮರದ ಹಲಗೆ,ಲೋಹದ ಫಲಕಗಳ ಮೇಲೆಯೂ ಭಿತ್ತಿಶಿಲ್ಪಗಳನ್ನು ರಚಿಸುತ್ತಿದ್ದರು. ಪ್ರಾಚೀನ ಕಾಲದ ಜಪಾನಿನ ಅರಮನೆಗಳು, ದೇವಾಲಯಗಳು ಮನೆ, ವಿಹಾರ ಹಾಗೂ ಇನ್ನಿತರ ಕಡೆಗಳಲ್ಲಿ ಮರದ ಮಾಧ್ಯಮದಿಂದಲೇ ನಿರ್ಮಿಸಲ್ಪಡುತ್ತಿತ್ತು. ಪ್ರಾಚೀನ ಕಾಲದ ಅರಮನೆ ಮಠದೇವಾಲಯಗಳಲ್ಲಿ ಮರದ ಗೋಡೆಗಳ ಮೇಲೆ ಭಿತ್ತಿಚಿತ್ರಗಳನ್ನು ಇಂದಿಗೂ ಕಾಣಬಹುದು. ಕ್ರಿ.ಶ.೧೯೫೦ರ ತಾಮ್ರ ಶಾಸನವೊಂದರಲ್ಲಿ ಅಲ್ಲಿಯ ದೇವಾಲಯದಲ್ಲಿ ದೇವರನ್ನು ಫಲಕುರನಾಥ ಎಂದು ಕರೆದಿದ್ದು, ಸ್ಥಳ ಪೂರಾಣದಲ್ಲಿ ಉಲ್ಲೇಖಿಸಲಾಗಿದೆ. ಇದು ಚಿತ್ರವನ್ನು ಮರದ ಅಲಗೆಯ ಮೇಲೆ ರಚಿಸಿದ ಉದಾಹರಣೆಯಾಗಿದೆ. ದುರ್ಗಾ ದೇವಿಯ ದೇವಾಲಯದಲ್ಲಿ ೧೯ನೇ ಶತಮಾದಲ್ಲಿ ರಚನೆಯಾದ ಭಿತ್ತಿಚಿತ್ರಗಳಿವೆ. ಕರ್ನಾಟಕದಲ್ಲಿಯೂ ಸಹ ಕಟ್ಟಿಗೆಯ ಮೇಲೆ ರಚನೆಯಾದಂತಹ ಭಿತ್ತಿಚಿತ್ರಗಳು ಕಂಡು ಬರುತ್ತವೆ.

ಮರವನ್ನು ಕಟ್ಟಡದ ಭಾಗವಾಗಿ ಹೊಂದಿಸಿ ಅದರ ಮೇಲೆ ಚಿತ್ರರಚಿಸುವುದು. ಅಲ್ಲದೇ ಬಿಡಿ ಫಲಕ ಮರದಿಂದ ಮಾಡಿದ ತೇರು ಪಲ್ಲಕ್ಕಿ ಪೆಟ್ಟಿಗೆ, ತೊಟ್ಟಿಲು ಹೀಗೆ ಅಲಂಕಾರಿಕ ಪೆಟ್ಟಿಗೆಳನ್ನು ರಚಿಸುವುದು ಕೆಲವು ಭಾಗಗಳಲ್ಲಿ ಕಂಡುಬರುತ್ತವೆ. ಹೀಗೆ ಕಾಲ ಬದಲಾದಂತೆಲ್ಲಾ ಕಲಾಕೃತಿಯ ಸಂಯೋಜನೆಗಳಲ್ಲಿಯೂ ಸಹ ಅನೇಕ ಬದಲಾವಣೆಯಾಗಿರುವುದನ್ನು ಕಾಣಬಹುದು. ಹಿಂದಿನ ಕಾಲದಲ್ಲಿ ಶ್ರೀಮಂತವರ್ಗದವರು ರಾಜರು ಹೀಗೆ ಅನೇಕರು ಬಾಗಿಲುಗಳ ಮತ್ತು ಅವರ ಮನೆಯ ಯಾವುದೇ ಒಂದು ಭಾಗವು ಸೌಂದರ್ಯವಾಗಿ ಕಾಣುವ ಹಿನ್ನೆಲೆಯಲ್ಲಿ ರಚಿಸಿಕೊಳ್ಳುತ್ತಿದ್ದರು. ಆಧುನಿಕ ಕಾಲದಲ್ಲಿ ಶ್ರೀಮಂತರು ಮಧ್ಯಮ ವರ್ಗದವರು ಜನಸಾಮಾನ್ಯರು ರಚಿಸಿಕೊಳ್ಳುತ್ತಿರುವುದನ್ನು ಕಾಣಬಹುದಾಗಿದೆ. ಈಗಿನ ಯುವ ಕಲಾವಿದರು ಮರದ ಮಾಧ್ಯಮದಲ್ಲಿ ತಮ್ಮಲ್ಲಿರುವ ಪ್ರತಿಭೆಯನ್ನು ವಿಭಿನ್ನವಾಗಿರುವಂತಹ ಮರದ ಮಾಧ್ಯಮದ ಭಿತ್ತಿಶಿಲ್ಪ ಮಾಧ್ಯಮವನ್ನು ಕಾಣಬಹುದಾಗಿದೆ.

ಮರ ಮೊದಲು ಮನೆ ನಿರ್ಮಾಣಕ್ಕೆ ಸೀಮಿತವಾಗಿತ್ತು. ನಂತರದಲ್ಲಿ ಪೀಠೋಪಕರಣಗಳ ತಯಾರಿಕೆಗೆ ಅತಿ ಹೆಚ್ಚಾಗಿ ಬಳಸಲಾಗುತ್ತಿತ್ತು. ಇತ್ತೀಚಿನ ದಿನಗಳಲ್ಲಿ ಮರ ಎನ್ನುವುದು, ಭಿತ್ತಿಶಿಲ್ಪ ಹಾಗೂ ಉಬ್ಬು

ಚಿತ್ರಗಾರಿಕೆಯೆ ತಯಾರಿಕೆಯಲ್ಲಿ ಮರದ ಬೇಡಿಕೆ ಹೆಚ್ಚಾಗಿದ್ದು. ಇಂದಿನ ದಿನಗಳಲ್ಲಿಗಂಧ, ತೇಗ, ಹೊನ್ನ, ಬೀಟಿ, ಹಲಸು, ಮಾವು ಇನ್ನು ಮುಂತಾದ ಬೆಲೆ ಬಾಳುವ ಮರದ ಹಲಿಗೆಗಳಲ್ಲಿ ವಿಶ್ವಕರ್ಮರು ಅದ್ಭುತವಾಗಿ ಚಿತ್ರ ಮತ್ತು ಶಿಲ್ಪ ರಚನೆಯನ್ನು ಬಹಳ ಸೊಗಸಾಗಿ ನಿರ್ಮಿಸ ತೊಡಗಿದರು. ಮರದ ತುಂಡುಗಳನ್ನು ಬಳಸಿಕೊಂಡು ಚಿತ್ರ ರಚನೆ ಮಾಡುವುದಕ್ಕೆ ಮೈಸೂರು ಕಲೆ (ಹುದುಗುಕಲೆ) ಕೂಡಾ ಒಂದಾಗಿದೆ. ಈ ಕಲೆಯನ್ನು ಎಷ್ಟು ಜನರು ಪೂರ್ವಜರು ಕಲಿತ ವಿದ್ಯೆ ಎಂದು ತಿಳಿದು ತಲೆತಲೆಮಾರಿನಿಂದಲೂ ಇದರ ಸೊಬಗ ಕುಲಕಸುಬನ್ನಾಗಿಸಿಕೊಂಡು ಬಂದಿದ್ದಾರೆ. ಬಣ್ಣ ಬಣ್ಣದ ಮರದ ತುಂಡುಗಳ ಜೋಡಣೆ ಬಲು ರಮಣೀಯವಾಗಿರುತ್ತದೆ. ಅಲ್ಲಿ ಮೂಡಿಬರುವ ದಸರ ಹಬ್ಬದ ರಮಣೀಯ ದೃಶ್ಯಗಳು ಕೃಷ್ಣಾರ್ಜುನರ ಗೀತೋಪದೇಶ ಚಿತ್ರಣ, ರಾಧಾಕೃಷ್ಣರ ಚಿತ್ರಣ, ಆನೆ, ಕುದುರೆ, ನವಿಲು, ಬಾತುಕೋಳಿ, ಹಳ್ಳಿಯ ಜೀವನದ ಹಲವಾರು ಚಿತ್ರಗಳನ್ನು ರಚಿಸಿರುವುದು ಬಲು ರಮಣೀಯವಾಗಿ ಮೂಡಿ ಬಂದಿದೆ. ಇಂತಹ ಚಿತ್ರಗಳನ್ನು ನಾವು ಮೈಸೂರಿನ ಅರಮನೆಯ ಆವರಣದಲ್ಲಿ ಹಾಗೂ ಅಲ್ಲಿನ ಗ್ಯಾಲರಿಗಳಲ್ಲಿ ನಾವು ಕಾಣಬಹುದಾಗಿದೆ.

ಹಾಗಾಗಿ ಮಾನವನ ಬಳಕೆಗೆ ಮಾತ್ರವಲ್ಲದೇ ಕಲಾ ಜಗತ್ತಿಗೆ ಮರದ ಮಾಧ್ಯಮ ಅತ್ಯವಶ್ಯಕವೆಂದು ಹೇಳತೀರದು. ಸಮಕಾಲೀನ ಕಲಾವಿದರು ಕಲಾತ್ಮಕವಾಗಿ ಮಾಡಿರುವಂತಹ ವಸ್ತುವಾಗಿ ಬಳಸಿಕೊಂಡಿದ್ದಾರೆ. ಸಮಾಜದಲ್ಲಿ ಅನುವಾಗುವಂತೆ ತನ್ನ ಮನೆಯ ಸೌಂದರ್ಯವನ್ನು ಹೆಚ್ಚಿಸಲು ಮರದಿಂದ ಮಾಡಿದ ದೇವರು ಪರಿಸರ ಚಿತ್ರಗಳನ್ನು ಹೆಚ್ಚಾಗಿ ರಚಿಸಿಕೊಳ್ಳುತ್ತಿದ್ದರು. ಅದೇ ರೀತಿಯಾಗಿ ದೇವಾಲಯ ಕಂಪನಿಗಳಲ್ಲಿ ಶಾಲೆಗಳಲ್ಲಿ ಸಹ ಮರದಲ್ಲಿ ವಿನ್ಯಾಸ ಮಾಡಿರುವುದನ್ನು ಕಾಣುತ್ತೇವೆ.

ಆಧುನಿಕ ಯುಗದಲ್ಲಿ ಅನೇಕ ಸೃಜನಾತ್ಮಕ ಕಲಾಕೃತಿಗಳನ್ನು ರಚನೆ ಮಾಡುತ್ತಿರುವುದನ್ನು ಕಾಣುತ್ತೇವೆ. ಅದರಲ್ಲಿಯೂ ಮರದ ಮಾಧ್ಯಮದಲ್ಲಿ ಸೃಜನಾತ್ಮಕ ಕಲಾಕೃತಿಗಳನ್ನು ರಚಿಸುವುದು ತುಂಬಾ ಕಡಿಮೆ ಪ್ರಮಾಣ ಎಂದು ಹೇಳಬಹುದಾಗಿದೆ. ಇಂತಹ ಕಲಾಕೃತಿಗಳನ್ನು ರಚಿಸುವಲ್ಲಿ ಪ್ರಮುಖವಾಗಿ ಎಂ.ಎಸ್. ಮೂರ್ತಿ, ವಿರೇಂದ್ರ ಷಾ ರವರು ತಮ್ಮ ಸೃಜನಾತ್ಮಕ ಭಿತ್ತಿಶಿಲ್ಪಗಳನ್ನು ಮರದ ಮಾಧ್ಯಮದಲ್ಲಿ ರಚಿಸಿದ್ದಾರೆ. ಸೃಜನಾತ್ಮಕ ಕಲೆಯನ್ನು ಕೊಡುಗೆಯಾಗಿ ನೀಡಿರುವುದನ್ನು ಕಾಣಬಹುದು. ಈ ಆಧುನಿಕ ಯುಗದಲ್ಲಿ ಅನೇಕ ಕಿರಿಯ,ಹಿರಿಯ ಕಲಾವಿದರು ಮರದ ಮಾಧ್ಯಮದಲ್ಲಿ ಭಿತ್ತಿಶಿಲ್ಪಗಳನ್ನು ರಚಿಸುತ್ತಿರುವುದನ್ನು ಕಾಣುತ್ತೇವೆ.

ನವಿಲು

ಈ ಭಿತ್ತಿಶಿಲ್ಪವನ್ನು ಬೆಂಗಳೂರಿನ ಎಂ.ಎಸ್.ಮೂರ್ತಿಯವರ ಭೂಮಿ ಎಂಬ ಸ್ಟೂಡಿಯೋದಲ್ಲಿ ನೋಡಬಹುದು. ಇದನ್ನು ಮರದಿಂದ ರಚನೆ ಮಾಡಿ ಉತ್ತಮವಾಗಿ ಸಂಯೋಜನೆ ಮಾಡಿದ್ದಾರೆ.

ಈ ಭಿತ್ತಿಶಿಲ್ಪದಲ್ಲಿ ನವಿಲು ನಾಟ್ಯವಾಡುತ್ತಿರುವುದನ್ನು ಕಾಣಬಹುದು. ಅದರ ಕೆಳಭಾಗದಲ್ಲಿನ ಒಂದು ಚೌಕಟ್ಟಿನಲ್ಲಿ ವೃತ್ತಾಕಾರವಾದಂತಹ ಆಕೃತಿಗಳನ್ನು ರಚಿಸಿದ್ದು. ಆ ಮರದ ಮೇಲೆ ವಿವಿಧ ಮೈವಳಿಕೆಗಳನ್ನು ತೆಗೆದಿರುವುದನ್ನು ಕಾಣುತ್ತೇವೆ. ಅದರ ಪಕ್ಕದಲ್ಲಿ ಶಿವಲಿಂಗವನ್ನು ಕಾಣಬಹುದು. ಅದರ ಕೆಳಭಾಗದಲ್ಲಿ

ಹೂವನ್ನು ರಚಿಸಿದ್ದು, ವಿವಿಧ ವೃತ್ತಾಕಾರ ಆಯುತಾ ಚೌಕಾಕಾರದಿಂದ ವಿವಿಧ ವಿನ್ಯಾಸಗಳನ್ನು ರಚಿಸಿದ್ದು ಅದರ ಮೇಲಿನ ಭಾಗದಲ್ಲಿ ವೃತ್ತಾಕಾರವಿರುವಂತೆ ರಚಿಸಿದ್ದಾರೆ. ರಚಿಸಿದಂತಹ ಕೆಲವು ಭಾಗಗಳಿಗೆ ಬಣ್ಣದಿಂದ ಲೇಪಿಸಿದರೆ ಇನ್ನೂ ಕೆಲವೆಡೆ ಸುಟ್ಟಿರುವಂತಹದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಸಂಯೋಜನೆ ಉತ್ತಮವಾಗಿದೆ.

**ಹೂವಿನ ಮಗ್ಗು**

ಭಿತ್ತಿಶಿಲ್ಪವನ್ನು ರಮೇಶ್ ಜೋಳದ್‌ರವರು ರಚಿಸಿದ್ದು, ಮರದ ಮಾಧ್ಯಮದಿಂದ ರಚಿಸದ್ದಾರೆ. ಈ ಭಿತ್ತಿಶಿಲ್ಪದಲ್ಲಿಹರಳುತ್ತಿರುವ ಹೂವಿನ ಮಗ್ಗನ್ನು ರಚಿಸಿದ್ದು. ಚಿಕ್ಕ ಚಿಕ್ಕ ದಳಗಳನ್ನು ಸಹ ರಚಿಸಿದ್ದಾರೆ. ಇಲ್ಲಿ ಮೊಗ್ಗನ್ನು ದೊಡ್ಡಗಾತ್ರದಲ್ಲಿ ರಚಿಸಿ ಇನ್ನುಳಿದಂತೆ ಚಿಕ್ಕ ಚಿಕ್ಕ ದಳಗಳನ್ನು ಮಾಡಿರುವುದನ್ನು ಕಾಣುತ್ತೇವೆ. ಮಧ್ಯಭಾಗದಲ್ಲಿ ತ್ರಿಭುಜಾಕಾರವಾಗಿ ರಚಿಸಿದ್ದು, ಮೇಲಿನ ಭಾಗದಲ್ಲಿ ಸುರುಳಿಕಾರವಾಗಿ ರಚಿಸಿರುವಂತಹ ಹಾವಿನಂತೆ ಆಕಾರವನ್ನು ಕಾಣುತ್ತೇವೆ. ಹಿನ್ನಲೆಯಲ್ಲಿ ಸಮತಟ್ಟಾಗಿದ್ದು ಹೂವಿನ ಬಣ್ಣವನ್ನು ಕೆಂಪಾಗಿ ರಚಿಸಿದ್ದು ಅದರಲ್ಲಿ ರಚಿಸಿರುವ ತ್ರಿಭುಜವನ್ನು ಹಳದಿಬಣ್ಣದಿಂದ ರಚಿಸಿದ್ದಾರೆ.

**ಸ್ಪರ್ಧೆ**

ಭಿತ್ತಿಶಿಲ್ಪವನ್ನು ಬೆಂಗಳೂರಿನ ಎಂ.ಎಸ್.ಮೂರ್ತಿಯವರು ರಚಿಸಿದ್ದು, ೪x೪ ಅಳತೆಯನ್ನು ಹೊಂದಿದೆ. ಈ ಭಿತ್ತಿಶಿಲ್ಪದಲ್ಲಿ ಸ್ಪರ್ಧೆಗೆ ಸಂಬಂಧಿಸಿದಂತೆ ಇಲ್ಲಿ ರಚಿಸಿದ್ದಾರೆ. ಈ ಶಿಲ್ಪಾಕೃತಿಯಲ್ಲಿ ಎಡಭಾಗದಲ್ಲಿ ಒಂದು ವೃತ್ತಾಕಾರವಾಗಿರಚಿಸಿದ್ದು ಅದರ ಹಿಂದೆ ಮೈವಳಿಕೆಯನ್ನು ತೆಗೆದಿದ್ದಾರೆ. ಮೇಲ್ಭಾಗದಲ್ಲಿ ವಿ ಕಾರಾದಲ್ಲಿ ರಚನೆ ಮಾಡಿ ಅದಕ್ಕೆ ಹಸಿರು ಬಣ್ಣವನ್ನು ಲೇಪಿಸಿದ್ದಾರೆ. ಯು ಆಕಾರದಲ್ಲಿ ರಚಿಸಿದ ಕಪ್ಪು ಮತ್ತು ಹಸಿರು ಮಿಶ್ರಣ ಬಣ್ಣಗಳನ್ನು ಲೇಪಿಸಿದ್ದಾರೆ. ಅದರ ಮಧ್ಯಭಾಗದಲ್ಲಿ ಮೈವಳಿಕೆಯನ್ನು ಮಾಡದ್ದಾರೆ. ಕೆಳಭಾಗದಲ್ಲಿ ವಿವಿಧ ರೀತಿಯ ಆಕೃತಿಗಳನ್ನು ಕಾಣಬಹುದು. ಈ ಶಿಲ್ಪದಲ್ಲಿ ಮರದಿಂದ ಮೊದಲು ರಚನೆ ಮಾಡಿಕೊಂಡು ನಂತರ ಸಂಯೋಜನೆಗೆ ತಕ್ಕಂತೆ ಅಂಟಿಸಲಾಗಿದೆ. ಈ ಶಿಲ್ಪಾಕೃತಿಯಲ್ಲಿ ಕಪ್ಪು, ಹಸಿರು, ಕಂದು ಬಣ್ಣಗಳನ್ನು ಕಾಣಬಹುದು.

**ಭೂಮಿ ಮತ್ತು ಆಕಾಶ**

ಭಿತ್ತಿ ಶಿಲ್ಪವನ್ನು ಬೆಂಗಳೂರಿನ ಎಂ.ಎಸ್.ಮೂರ್ತಿಯವರು ರಚಿಸಿದ್ದಾರೆ. ಈ ಭಿತ್ತಿಶಿಲ್ಪವನ್ನು ನೋಡಿದರೆ ಭೂಮಿ, ಆಕಾಶವೆಂಬುವುದನ್ನು ತೋರಿಸುತ್ತದೆ. ಇಲ್ಲಿ ಎರಡು ಭಾಗಗಳನ್ನಾಗಿ ಮಾಡಿ ಮೇಲಿನ ಭಾಗವನ್ನು ಆಕಾಶವೆಂದು ಕರೆದರೆ, ಕೆಳಗಿನ ಭಾಗವನ್ನು ಭೂಮಿ ಎಂದು ಕರೆದಿದ್ದಾರೆ. ಇಲ್ಲಿ ಮೇಲಿನ ಭಾಗದಲ್ಲಿ ಒಬ್ಬ ಮನುಷ್ಯ ತಲೆಯ ಆಕಾರದಂತಿದ್ದು, ಅದನ್ನು ಬೆಂಕಿಯಿಂದ ಸುಟ್ಟು ಕಪ್ಪು ಬಣ್ಣವಾಗಿ ಪರಿವರ್ತಿಸಿಕೊಂಡಿದ್ದು ಮೇಲಿನ ಭಾಗದಲ್ಲಿ ತ್ರಿಭುಜ ವಿನ್ಯಾಸದಿಂದ ಕೆಂಪುಬಣ್ಣದಿಂದ ರಚನೆ ಮಾಡಿದ್ದಾರೆ. ಅದರ ಮಧ್ಯ ಭಾಗದಲ್ಲಿ ಹಳದಿ ಬಣ್ಣದಿಂದ ಕೂಡಿದ್ದು, ಅದರ ಮಧ್ಯಭಾಗದಲ್ಲಿ ಕಪ್ಪುಬಣ್ಣದಿಂದ ಸುಟ್ಟಿರುವುದನ್ನು ಕಾಣುತ್ತೇವೆ. ಅದರ ಪಕ್ಕದಲ್ಲಿ ವೃತ್ತಾಕಾರವಾಗಿದ್ದು, ಮೇಲೆ ಮೂರು ನಾಮಗಳಿದ್ದಂತೆ

ರಚಿಸಿದ್ದು, ಕೆಳಭಾಗದ ಮನುಷ್ಯನ ಎದೆಯ ಭಾಗವನ್ನು ಅದರೊಳಗೆ ಅಮೂರ್ತಕಾರವಾಗಿ ಚೌಕಾಕಾರವನ್ನು ರಚಿಸಿದ್ದು, ಅದರೊಳಗೆ ಪದರುಗಳಿದ್ದಂತೆ ಅದನ್ನು ಹಳದಿ ಬಣ್ಣದಿಂದ ರಚಿತವಾಗಿದೆ. ಹಿನ್ನೆಲೆಯಲ್ಲಿ ಅನೇಕ ಮೈವಳಿಕೆಯನ್ನು ರಚಿಸಿರುವುದನ್ನು ಕಾಣುತ್ತೇವೆ.

**ಅನ್‌ಟೈಟಲ್**

ಭಿತ್ತಿಶಿಲ್ಪವನ್ನು ಗುಲ್ಬರ್ಗಾದ ವೀರೇಂದ್ರ ಷಾ ರವರು ೨೦೦೬ರಲ್ಲಿ ರಚನೆ ಮಾಡಿದ್ದಾರೆ. ೧೦x೪ ಅಡಿ ಅಳತೆಯನ್ನು ಹೊಂದಿದ್ದು ಮರದ ಮಾಧ್ಯಮದಿಂದ ರಚಿಸಲಾಗಿದೆ.

ಭಿತ್ತಿಶಿಲ್ಪದಲ್ಲಿ ಮಧ್ಯಭಾಗದಲ್ಲಿ ಗಣಪತಿಯನ್ನು ಕಾಣುತ್ತೇವೆ. ಅದರ ಹಿಂದೆ ವಿವಿಧ ರೀತಿಯ ಮೈವಳಿಕೆಗಳನ್ನು ಮತ್ತು ಜಾಮಿತಿಯ ಆಕಾರವಾಗಿರುವ ಕೆಲವು ವಸ್ತುಗಳನ್ನು ಉಪಯೋಗಿಸಿದ್ದು, ನಾನಾ ಆಕಾರಗಳನ್ನು ಈ ಸಂಯೋಜನೆಯಲ್ಲಿ ತೊಡಗಿಸಿದ್ದಾರೆ. ಇಲ್ಲಿ ಹಳದಿ ಕೆಂಪು, ಕಂದು ಬಿಳಿಯ ಬಣ್ಣವನ್ನು ಹೆಚ್ಚಾಗಿ ರಚಿಸಿರುವುದನ್ನು ಕಾಣುತ್ತೇವೆ. ಹಿಂದೆ ಹಳದಿ ಬಣ್ಣ ಮತ್ತು ಬಿಳಿಯ ಬಣ್ಣದ ಮಿಶ್ರಣದಿಂದ ಬಣ್ಣ ಲೇಪನ ಮಾಡಿದ್ದಾರೆ. ಮರದ ಮಾಧ್ಯಮದಲ್ಲಿ ಚಿಕ್ಕ ಚಿಕ್ಕದಾದಂತಹ ಭಾಗಗಳನ್ನು ಮಾಡುವುದು ತುಂಬಾ ಕಷ್ಟದ ಕೆಲಸ, ಆದರೂ ಕಲಾವಿದರು ಶ್ರಮವಹಿಸಿ ಈ ಕೆಲಸವನ್ನು ಮಾಡಿ ಭಿತ್ತಿಶಿಲ್ಪಾಕೃತಿಯನ್ನು ಪೂರ್ಣಗೊಳಿಸಿದ್ದಾರೆ.

**ಅನ್‌ಟೈಟಲ್-೨**

ಭಿತ್ತಿ ಶಿಲ್ಪವನ್ನು ಗುಲ್ಬರ್ಗಾದ ವಿರೇಂದ್ರ ಷಾ ರವರು ೩೦೧೦ರಲ್ಲಿ ರಚಿಸಿದ್ದು, ೪x೧೫ ಅಡಿ ಅಳತೆಯನ್ನು ಹೊಂದಿದ್ದು, ಮರದ ಮಾಧ್ಯಮದಿಂದ ರಚಿಸಿದ್ದಾರೆ.

ಭಿತ್ತಿಶಿಲ್ಪದಲ್ಲಿ ಮಧ್ಯಭಾಗದಲ್ಲಿ ವೃತ್ತಾಕಾರವಾದಂತಹ ಮರದ ಮಾಧ್ಯಮದಿಂದ ಮಾಡಿರುವುದನ್ನು ಕಾಣಬಹುದು. ಇಲ್ಲಿ ಜಾಮಿತಿಯ ಆಕಾರಗಳನ್ನು ಬಳಸಿಕೊಂಡು ವಿವಿಧ ಆಕಾರಗಳನ್ನು ರಚಿಸಿ. ಇಲ್ಲಿ ಒಂದಕ್ಕೊಂದು ಹೊಂದಾಣಿಕೆಯಾಗಿ ಇರುವಂತೆ ಸಂಯೋಜಿಸಿರುವುದನ್ನು ಕಾಣುತ್ತೇವೆ. ಇಲ್ಲಿ ಬಣ್ಣಗಳನ್ನು ಸಹ ಲೇಪಿಸಿದ್ದಾರೆ. ಹಳದಿ,ಕೆಂಪು, ಬಣ್ಣಗಳನ್ನು ಬಳಸಿರುವುದರಿಂದ ಅದು ಇನ್ನು ಸುಂದರವಾಗಿ ಜನರನ್ನು ಆಕರ್ಷಿಸುವಂತಾಗುತ್ತದೆ.

**ಕುದುರೆ**

ಈ ಭಿತ್ತಿಶಿಲ್ಪವನ್ನು ಎಂ.ಎಸ್.ಮೂರ್ತಿಯವರು ರಚಿಸಿದ್ದು. ಬೆಂಗಳೂರಿನ ಭೂಮಿ ಸ್ಟೂಡಿಯೋದಲ್ಲಿ ಈ ಕಲಾಕೃತಿಯನ್ನು ಕಾಣಬಹುದು.

ಈ ಕಲಾಕೃತಿಯಲ್ಲಿ ಜನಪದ ಶೈಲಿಯಲ್ಲಿ ಕಾಣುವಂತಹ ಭಿತ್ತಿಯಾಗಿದೆ. ಇದರ ಮಧ್ಯಭಾಗದಲ್ಲಿ ಮುಖದಿಂದ ಎದೆಯ ಭಾಗದವರೆಗೆ ಇರುವಂತಹ ಆಕರ ಕಾಣಿಸುತ್ತದೆ. ಅದರಲ್ಲಿ ಹಿಂದಿ ಪದಗಳನ್ನು ಬರೆದು ಕಂಪನಿಯ ಎರಡು ವೃತ್ತಗಳನ್ನು ಕಾಣಬಹುದು. ಅವು ಕಣ್ಣುಗಳಂತೆ ಕಾಣುತ್ತದೆ.ಅದರ ಕುತ್ತಿಗೆಯ ಭಾಗವನ್ನು ಉಬ್ಬುತಗ್ಗುಗಳ ಸರಳ ರೇಖಾ ವಿನ್ಯಾಸದಲ್ಲಿ ರಚಿಸಿದ್ದು ಅದರ ಎದೆಯ ಭಾಗದಲ್ಲಿ ಹಣೆಯ

ಮೇಲೆ ಕುಂಕುಮ, ಎರಡು ಕಣ್ಣುಗಳು ಕಾಣುವಂತೆ ರಚಿಸಿದ್ದಾರೆ. ಕೆಳಭಾಗಗದಲ್ಲಿ ಏಳು ಜನರು ನಿಂತಿದ್ದು, ಅದು ಜನಪದ ಶೈಲಿಯಲ್ಲಿ ರಚನೆಗೊಂಡಿವೆ. ಅದರ ಬಲಭಾಗದಲ್ಲಿ ಕುದುರೆಯ ಆಕಾರವಾಗಿ ಕಾಣಿಸುತ್ತದೆ. ಅದರ ಮೂಗು ಬಾಯಿ ಕೊರಳಿಗೆ ಕಟ್ಟಿರುವಂತೆ ವಿನ್ಯಾಸದ ಪಟ್ಟಿ ಮುಂತಾದವುಗಳನ್ನು ಕಾಣುತ್ತೇವೆ. ಅದರ ಬೆನ್ನಿನ ಮೇಲೆ ವಿವಿಧ ವಿನ್ಯಾಸದಿಂದ ಕೂಡಿದ ಬಟ್ಟೆಯ ಆಕೃತಿಯಂತೆ ರಚನೆಗೊಂಡಿರುವ ತನ್ನ ಮುಂದಿನ ಕಾಲನ್ನು ಮೇಲಕ್ಕೆ ಎತ್ತಿ ಹಿಂದಿನ ಕಾಲನ್ನು ನೆಲಕ್ಕೂ ಊರಿರುವುದನ್ನು ಕಾಣುತ್ತೇವೆ. ಅದರ ಮೇಲೆ ಸುರುಳಿಯಂತೆ ಸುತ್ತಿಕೊಂಡು ಅದರ ಸುತ್ತ ಸೂರ್ಯನಂತೆ ಕಿರಣಗಳನ್ನು ರಚಿಸಿದ್ದಾರೆ. ಇದು ತುಂಬಾ ಅಂದವಾಗಿ ಕಾಣಿಸುತ್ತದೆ.

### ಮರದ ಮಾಧ್ಯಮ ರಚನಾ ವಿಧಾನ

ಮರ ಮಾಧ್ಯಮದ ಶಿಲ್ಪಗಳನ್ನು ಕೆತ್ತಿ ತೆಗೆಯುವ ಕ್ರಮದಿಂದ ರಚಿಸಲಾಗುತ್ತದೆ. ಅದು ಉಬ್ಬು ಶಿಲ್ಪ ಅಥವಾ ದುಂಡುಶಿಲ್ಪವೇ ಆಗಿರಬಹುದು. ಕೆತ್ತಿತೆಗೆಯುವುದೇ ಇಲ್ಲಿ ಮುಖ್ಯ. ಮೊದಲು ಭಿತ್ತಿಶಿಲ್ಪ ರಚನೆ ಮಾಡಬೇಕಾದರೆ ಮರದ ಮಾಧ್ಯಮದ ವಸ್ತುವನ್ನು ತನಗೆ ಬೇಕಾಗುವ ಆಕಾರದಲ್ಲಿ ಕತ್ತರಿಸಿಕೊಂಡು ಅದಕ್ಕೆ ಹೊಂದಾಣಿಕೆಯಾಗುವಂತೆ ಒಂದು ಕರಡು ಚಿತ್ರವನ್ನು ಮಾಡಿಕೊಂಡು ಅದನ್ನು ಮರದ ಮೇಲೆ ರಚನೆ ಮಾಡಬಹುದು ಅಥವಾ ಟ್ರಸ್ ಮಾಡಿಕೊಳ್ಳಬಹುದು. ರೇಖಾಚಿತ್ರ ಅಥವಾ ಟ್ರಸ್ ಮಾಡಿಕೊಂಡರೆ ಭಿತ್ತಿಶಿಲ್ಪದಲ್ಲಿ ಯಾವುದೇ ರೀತಿಯ ಬದಲಾವಣೆಗೆ ಅವಕಾಶವಿರುವುದಿಲ್ಲ. ಕಲಾವಿದನು ಮರದಲ್ಲಿ ಸ್ವಲ್ಪ ಸ್ವಲ್ಪ ಕೆತ್ತುತ್ತಾ ಹೋದಂತೆಲ್ಲಾ ಒಂದು ಆಕಾರವು ಬರುತ್ತ ಅದನ್ನು ಫೈನ್ ಮಾಡಿಕೊಂಡು ಅಂತಿಮ ಹಂತಕ್ಕೆ ತರುತ್ತಾರೆ.

ಇನ್ನೊಂದು ವಿಧಾನದಲ್ಲಿ ಬಿಡಿ ಬಿಡಿ ಆಕಾರಗಳನ್ನು ರಚಿಸಿಕೊಂಡು ನಂತರದಲ್ಲಿ ಒಂದೊಂದಾಗಿ ಭಿತ್ತಿಗೆ ಅಂಟಿಸಿ ಸಂಯೋಜನೆ ಮಾಡುತ್ತಾರೆ. ಈ ರೀತಿ ಮಾಡಿದಂತೆ ಭಿತ್ತಿಶಿಲ್ಪಗಳಿಗೆ ಯಾವುದೇ ರೀತಿಯ ಆಪತ್ತುಗಳು ಬರಬಾರದೆಂದು ಹೊಳಪು ಇರಬೇಕು. ವುಡ್‌ಪಾಲಿಶ್ ಅಥವಾ ವಾರ್‌ನಿಸನ್ನು ಹಚ್ಚುತ್ತಾರೆ. ಕೆಲವು ಕಲಾವಿದರು ಬರ್‌ನಿಂಗ್ ರಚನಾವಿಧಾನವನ್ನು ಮಾಡುವುದನ್ನು ಆಧುನಿಕ ಯುಗದಲ್ಲಿ ಕಾಣಬಹುದು. ಈ ರೀತಿಯಾಗಿ ಮಾಡುವುದರಿಂದ ಯಾವುದೇ ರೀತಿಯ ಆಪತ್ತುಗಳು ಬರುವುದಿಲ್ಲ ಎಂದು ಎಂ.ಎಸ್.ಮೂರ್ತಿಯವರು ಹೇಳುತ್ತಾರೆ. ಉಪಯೋಗಿಸುವ ಪರಿಕರಗಳು:- ಸುತ್ತಿಗೆ, ಉಳಿ (ಸಣ್ಣ ಮತ್ತು ದೊಡ್ಡಗಾತ್ರ) ವಾರ್‌ನಿಸ್, ವುಡ್‌ಪ್ರೈಮರ್ ಇತ್ಯಾದಿ.

ಭಿತ್ತಿಶಿಲ್ಪ ರಚನಾ ಮಾಧ್ಯಮದಲ್ಲಿ, ಫೈಬರ್ ಮತ್ತು ಮರಮಾಧ್ಯಮವು ಒಂದು ಉತ್ತಮ ಮಾಧ್ಯಮವಾಗಿದ್ದು, ಇಂದು ಹೆಚ್ಚು ಪ್ರಚಲಿತದಲ್ಲಿ ಇರುವಂತಹ ಮಾಧ್ಯಮಗಳಾಗಿವೆ. ಕಲಾವಿದನು ತನ್ನ ಅಭಿವ್ಯಕ್ತಿಯನ್ನು ವ್ಯಕ್ತಪಡಿಸಲು ಭಿತ್ತಿಯನ್ನು ಸುಂದರಗೊಳಿಸಲು ಅವನ ವಿನ್ಯಾಸಕ್ಕಾನುಸಾರ ಪೂರಕವಾದಂತಹ ಮಾಧ್ಯವಾಗಿದೆ. ಫೈಬರ್ ಮಾಧ್ಯಮವು ಭಾರವಿಲ್ಲದ ಮತ್ತು ಬಾಳಿಕೆಗೆ ಆಕರ್ಷಕವಾದ ಅದರಲ್ಲೂ ಮಾಧ್ಯಮವಾಗಿರುವುದರಿಂದ ಮಾಧ್ಯಮವನ್ನು ಹೆಚ್ಚು ಜನ ಇಷ್ಟಪಡುತ್ತಾರೆ.

* * *

ಅಧ್ಯಾಯ - ಏಳು

# ಸಂಕೀರ್ಣ ಮಾಧ್ಯಮಗಳ ಭಿತ್ತಿಚಿತ್ರ/ಶಿಲ್ಪ ಮಾಧ್ಯಮ

ಭಿತ್ತಿಚಿತ್ರ/ಶಿಲ್ಪ ಪ್ರತ್ಯೇಕ ಮಾಧ್ಯಮದಲ್ಲಿ ಕಲಾಕೃತಿಗಳು ರಚನೆಯಾಗಿರುತ್ತವೆ. ಆದರೆ ಸಂಕೀರ್ಣ ಮಾಧ್ಯಮದ ಭಿತ್ತಿಚಿತ್ರ/ಶಿಲ್ಪ ಕಚ್ಚಾವಸ್ತುಗಳಲ್ಲಿ ರಚನೆ ಮಾಡಿದ್ದಾಗ ಮಾಧ್ಯಮಗಳ ಸಮ್ಮಿಶ್ರಣಗೊಂಡು ಆಗುವಂತಹ ಕೃತಿ ಅಂದರೆ ಮಣ್ಣು, ಸಿಮೆಂಟ್, ಕಬ್ಬಿಣ, ಇನ್ನಿತರ ವಸ್ತುಗಳನ್ನು ಉಪಯೋಗಿಸಿಕೊಂಡು ತಯಾರಿಸುವ ಮಾಧ್ಯಮಗಳಾಗಿವೆ. ಇವನ್ನೆಲ್ಲ ಒಟ್ಟಾರೆ ಅಧ್ಯಯನ ದೃಷ್ಟಿಯಿಂದ ಸಂಕೀರ್ಣ ಮಾಧ್ಯಮದ ಭಿತ್ತಿಚಿತ್ರ/ಶಿಲ್ಪ ಕಲೆಯೆಂದು ವಿವೇಚನೆ ಮಾಡಲಾಗಿದೆ.

ಸಂಕೀರ್ಣ ಮಾಧ್ಯಮದ ಭಿತ್ತಿಚಿತ್ರ/ಶಿಲ್ಪ ತುಂಬ ವೈವಿಧ್ಯಮಯವಾಗಿರುವುದು ಗಮನ ಸೆಳೆಯುತ್ತವೆ. ಮಿಶ್ರರೂಪದಲ್ಲಿ ಬಳಸುವಂತಹ ಮಾಧ್ಯಮಗಳು ರಚನಾಕ್ರಮ ಎಲ್ಲವೂ ವೈವಿಧ್ಯಮಯವಾಗಿರುತ್ತವೆ. ಮಣ್ಣು ಕಟ್ಟಿಗೆ ಕಲ್ಲು ಲೋಹಮಾಧ್ಯಮದ ಚಿತ್ರಶಿಲ್ಪಗಳಂತೆ ಸಂಕೀರ್ಣ ಮಾಧ್ಯಮಗಳಲ್ಲಿಯೂ ಸಹ ಕೆತ್ತುವುದು ಮೆತ್ತುವುದು, ಜೋಡಿಸುವುದು ಮುಂತಾದ ಹಲವಾರು ವಿವಿಧ ಕ್ರಮಗಳು ಇರುತ್ತವೆ. ಅಲ್ಲದೇ ಸಂಕೀರ್ಣ ಮಾಧ್ಯಮದಲ್ಲಿ ಅತ್ಯಂತ ಚಿಕ್ಕ ಮತ್ತು ದೊಡ್ಡ ಪ್ರಮಾಣದ ಆಕರಗಳನ್ನು ಉಪಯೋಗಿಸಿರುವುದು ಕಂಡು ಬರುತ್ತದೆ. ಈ ರೀತಿಯಾಗಿ ರಚನೆಯಾದ ಭಿತ್ತಿಚಿತ್ರ/ಶಿಲ್ಪಗಳಿಗೆ ಅಶಾಶ್ವತ ಮಾಧ್ಯಮದ ಚಿತ್ರ ಶಿಲ್ಪಗಳೆಂದೂ ಕರೆಯಬಹುದು. ದುಡಿಮೆಯ ಬದುಕಿನ ದಾರಿಯಲ್ಲಿಯೂ ಆನಂದ ಸ್ವಾಧನೆ ಮನುಷ್ಯನು ಸಹಜವಾಗಿ ಪ್ರಯತ್ನಿಸಿದನು. ಅದಕ್ಕಾಗಿ ಅವನು ದುಡಿಮೆಯ ಹಾಗೂ ಬಿಡುವಿನ ವೇಳೆಯಲ್ಲಿ ಬಳಸಿಕೊಂಡನು. ಈ ವೇಳೆಯಲ್ಲಿ ಹಲವಾರು ಕಲೆಗಳು ಉಗಮವಾಗಿ ವಿಕಾಸ ಹೊಂದುತ್ತವೆ. ಅವುಗಳಲ್ಲಿ ಹಲವು ಬಗೆಯ ಸಂಕೀರ್ಣ ಮಾಧ್ಯಮದ ಶಿಲ್ಪಗಳೂ ಆತನ ಸೃಜನಶೀಲತೆಯ ಸಂಕೇತವಾಗಿ ರೂಪುಗೊಂಡವು. ಈ ಭಿತ್ತಿಚಿತ್ರ/ಶಿಲ್ಪಗಳಲ್ಲಿ ನೋಡುಗರ ಕಣ್ಣುಗಳನ್ನು ತಣಿಸುವಂತೆ ಭಿತ್ತಿಶಿಲ್ಪ ಶೃಂಗಾರವಾಗಿರುವಂತೆ ವಿವಿಧ ರೀತಿಯ ಭಿತ್ತಿಚಿತ್ರ/ಶಿಲ್ಪಗಳನ್ನು ನಮ್ಮ ಪೂರ್ವಜರು ಸೃಷ್ಟಿಸಿದರು ಹೀಗಾಗಿ ಸಂಕೀರ್ಣ ಮಾಧ್ಯಮದ ಭಿತ್ತಿಚಿತ್ರ/ಶಿಲ್ಪಗಳನ್ನು ಸೌಂದರ್ಯ ಪ್ರಜ್ಞೆಯಿಂದ ಪರಿಗಣಿಸಬೇಕಾಗುತ್ತದೆ. ಹೀಗೆ ಆಧುನಿಕ ಕಲಾವಿದರಲ್ಲಿ ಯುವಕಲಾವಿದರು. ತನ್ನಲ್ಲಿರುವ ಆಲೋಚನಾ ಶಕ್ತಿಯನ್ನು ವಿವಿಧ ಮಾಧ್ಯಮಗಳನ್ನು ಬಳಸಿಕೊಂಡು

ಜನರಿಗೆ ಆಕರ್ಷಣೆಯಾಗುವಂತೆ ರಚನೆ ಮಾಡುತ್ತಾರೆ. ಕಲಾವಿದರಲ್ಲೂ ಒಬ್ಬರಿಗಿಂತ ಇನ್ನೊಬ್ಬರೂ ಭಿನ್ನಾ-ವಿಭಿನ್ನಾವಾಗಿ ಸಂಕೀರ್ಣ ಮಾಧ್ಯಮದ ಕಲಾಕೃತಿಯ ರಚನೆಯಲ್ಲಿ ತೊಡಗಿದ್ದಾರೆ.

**ಹೂಗಳ ವಿನ್ಯಾಸ**

ಈ ಸಂಕೀರ್ಣ ಮಾಧ್ಯಮವನ್ನು ಬೆಂಗಳೂರಿನ ಆನಂದ ಭವನ ಕತ್ರಿಗುಪ್ಪೆಯ ಹೋಟೆಲ್ ಒಂದರಲ್ಲಿ ೮x೩೦ ಅಡಿ ಅಳತೆಯನ್ನು ಹೊಂದಿದ್ದು, ಸಂಕೀರ್ಣ ಮಾಧ್ಯಮದಿಂದ ರಚಿತವಾಗಿದೆ.

ಈ ಭಿತ್ತಿ ಸಂಕೀರ್ಣ ಮಾಧ್ಯಮವನ್ನು ಹೂಗಳ ಆಕಾರ ಹೊಂದಿದ್ದು, ಕಲಾಕೃತಿಯ ಎಡಭಾಗದಲ್ಲಿ ಒಂದು ಕಬ್ಬಿಣದ ವೃತ್ತಾಕಾರವಿದ್ದು, ಅದರ ಮೇಲೆ ಚಿಕ್ಕ ವೃತ್ತಾಕಾರವನ್ನು ರಚಿಸಿದ್ದು, ತಾಮ್ರದ ಎಲೆಗಳನ್ನು ರಚಿಸಿರುವುದು ಕಂಡುಬರುತ್ತದೆ. ದೊಡ್ಡ ಎಲೆಗಳ ಮೇಲೆ ಚಿಕ್ಕ ಬಂಗಾರ ಲೇಪನದ ಎಲೆಯನ್ನು ಸಹ ರಚಿಸಿದ್ದಾರೆ. ಅದರ ಪಕ್ಕದಲ್ಲಿ ಚಿಕ್ಕ ಚಿಟ್ಟೆಯನ್ನು ಹಿತ್ತಾಳೆ ಬಣ್ಣದಿಂದ ರಚಿಸಿದ್ದು, ಅದರ ಎಡಭಾಗದಲ್ಲಿ ಇನ್ನೊಂದು ಹೂವನ್ನು ದೊಡ್ಡದಾಗಿ ರಚಿಸಿ ಅದರ ಮೇಲ್ಭಾಗದಲ್ಲಿ ಹಾರುತ್ತಿರುವ ದೊಡ್ಡ ಚಿಟ್ಟೆಯನ್ನು ನೋಡಬಹುದು. ಅದರ ಪಕ್ಕದಲ್ಲಿ ಮತ್ತೊಂದು ಹೂವು ಅದರ ಪಕ್ಕದಲ್ಲಿ ಚಿಟ್ಟೆಯು ಕುಳಿತಿದ್ದು ಮತ್ತೊಂದು ಹೂವನ್ನು ರಚಿಸಿದ್ದು, ಅದರಲ್ಲೂ ಸಹ ಕಬ್ಬಿಣದ ಚಿಕ್ಕ ಚಿಕ್ಕ ಆಕಾರದಿಂದ ಕೂಡಿದ ಈ ಚಿಟ್ಟೆಯ ಮೈಬಣ್ಣವು ಹಿತ್ತಾಳೆಯ ಬಣ್ಣವಾಗಿದೆ. ಅದರ ಪಕ್ಕದಲ್ಲಿ ದೊಡ್ಡ ದೊಡ್ಡ ಗಾತ್ರದ ಎರಡು ಹೂವುಗಳನ್ನು ಕಾಣುತ್ತೇವೆ.

ಇವುಗಳಿಗೆ ಆಧಾರವಾಗಿ ಎರಡು ಕಂಬಗಳನ್ನು ನಿಲ್ಲಿಸಿ ಅದರ ಪಕ್ಕದಲ್ಲಿ ಒಂದು ವೃತ್ತಾಕಾರದಿಂದ ಕೂಡಿದ್ದು ಚಿಟ್ಟೆಯನ್ನು ದೊಡ್ಡ ಪ್ರಮಾಣದಲ್ಲಿ ಮಾಡಿರುವುದನ್ನು ಕಾಣುತ್ತೇವೆ. ಇವುಗಳ ಹಿಂಭಾಗದಲ್ಲಿ ಆಯತ, ಅರ್ಧವೃತ್ತ, ಚೌಕಾಕಾರವಾದ ಆಕೃತಿಗಳು ಕಂಡರೂ ಅದರ ಮೂಲ ವಿನ್ಯಾಸವನ್ನು ಮಾಡಿರುವುದು ತಿಳಿಯುತ್ತದೆ. ಅದರ ಹಿಂಭಾಗದಲ್ಲಿ ಕ್ರೀಮ್ ಬಣ್ಣದಿಂದ ಲೇಪನ ಮಾಡಿದ್ದಾರೆ.

**ಅನ್‌ಟೈಟಲ್**

ಈ ಸಂಕೀರ್ಣ ಮಾಧ್ಯಮ ಭಿತ್ತಿಶಿಲ್ಪವನ್ನು ಗುಲ್ಬರ್ಗಾ ವಿ.ಜಿ.ಅಂದಾನಿ ಎಂಬುವವರ ಮನೆಯ ಮೇಲೆ ರಾಜೇಶ್ ಎಂಬುವವರು ಭಿತ್ತಿಯ ರಚಿಸಿದ್ದು, ೧೦x೧೫ ಅಡಿ ಅಳತೆಯನ್ನು ಹೊಂದಿದೆ.

ಸಂಕೀರ್ಣ ಮಾಧ್ಯಮದಲ್ಲಿ ಟೈಲ್ಸ್, ಟೆರ್‍ರಾಕೋಟ, ಫೈಬರ್, ಪ್ಲಾಸ್ಟರ್ ಆಫ್ ಪ್ಯಾರೀಸ್ ಸಿಮೆಂಟನ್ನು ಉಪಯೋಗಿಸಿಕೊಂಡು ರಚಿಸಿದ್ದಾರೆ. ಕಲಾಕೃತಿಯ ಎಡಭಾಗದಲ್ಲಿ ಬಿಳಿ, ಕೆಂಪು ಬಣ್ಣದಿಂದ ಟೈಲ್ಸ್ ರಚಿತವಾದ ಒಂದು ಆಕಾರ ಟೆರ್‍ರಾಕೋಟಾ ಮಾಧ್ಯಮದಿಂದ ರಚಿತವಾದ ಆಕಾರಗಳು ದೊಡ್ಡ ವೃತ್ತಾಕಾರವಾಗಿರುವಂತ ಆಕಾರಗಳನ್ನು ಕಾಣುತ್ತೇವೆ. ಅದರೊಳಗೆ ಕಪ್ಪು ಬಣ್ಣದಿಂದ ಬಣ್ಣವನ್ನು ಲೇಪನ ಮಾಡಿ ಅದರ ಮೇಲೆ ಪ್ಲಾಸ್ಟರ್ ಆಫ್ ಪ್ಯಾರೀಸ್‌ನಿಂದ ರಚಿಸಿದ ಹಲವು ದುಂಡಾನಾಕಾರದಿಂದ ಕೂಡಿರುವಂತೆ ಮಣ್ಣಿನ ಆಕಾರಗಳನ್ನು ಅಂಟಿಸಲಾಗಿದೆ. ಅದರ ಪಕ್ಕದಲ್ಲಿ ಎರಡು ಪಕ್ಷಿಗಳ ಆಕಾರಗಳನ್ನು ಕಾಣಬಹುದಾಗಿದೆ. ಪಕ್ಷಿಯ ಮೇಲ್ಭಾಗದಲ್ಲಿ ಟೆರ್‍ರಾಕೋಟಾ ಮಾಧ್ಯಮದಿಂದ ರಚಿತವಾದಂತಹ ವಿವಿಧ

ವಿನ್ಯಾಸಗಳನ್ನು ಇಲ್ಲಿ ಅಂಟಿಸಲಾಗಿದೆ. ಇದರಿಂದಾಗಿ ಅದರ ವಿನ್ಯಾಸವು ಉತ್ತಮವಾಗಿ ರಚಿತಗೊಂಡಿದೆ. ಮೇಲಿನ ಭಾಗದಲ್ಲಿ ರಚಿತವಾದ ವೃತ್ತಾಕಾರದಲ್ಲಿ ಹಾವಿನ ಸುರುಳಿಯನ್ನು ಮತ್ತು ಅದರ ಮಧ್ಯದಲ್ಲಿ ಬಿಳಿಯ ಬಣ್ಣದಿಂದ ಕೂಡಿದ ವೃತ್ತಾಕಾರವನ್ನು ಮತ್ತು ಅದರ ಕೆಳಗೆ ನೀಲಿ, ಗುಲಾಬಿ ಬಣ್ಣದ ಸೆರಾಮಿಕ್ ಟೈಲ್ಸ್‌ಗಳನ್ನು ಜೋಡಿಸಿದ್ದು, ಅ ಸಂಕೀರ್ಣ ಮಾಧ್ಯಮ ಸೊಬಗನ್ನು ಹೆಚ್ಚಿಸುವಂತಾಗಿದೆ.

**ಅವನ ಪರಿಸರ (ವೀರಪ್ಪನ್)**

ಈ ಸಂಕೀರ್ಣ ಮಾಧ್ಯಮವನ್ನು ಡಾ.ಶಿವಾನಂದ ಬಂಟನೂರು ಅವರು ೧೯೯೩ರಲ್ಲಿ ರಚಿಸಿದ್ದು, ೨½x೨½ ಅಡಿ ಅಳತೆಯನ್ನು ಹೊಂದಿದೆ.

ಈ ಕಲಾಕೃತಿಯಲ್ಲಿ ಶಿವಾನಂದ ಬಂಟನೂರ ರವರು ದೃಷ್ಟ ಪರಿಸರವನ್ನು ಅತ್ಯಂತ ನೈಜವಾಗಿ ರಚಿಸಿದ್ದು ಆಕರ್ಷಕವಾಗಿದೆ. ಇಲ್ಲಿ ಕಾಣುವ ಮುಖವು ವೀರಪ್ಪನ್ ಆಗಿದ್ದು, ಅವನ ಮೀಸೆಯನ್ನು ಲೋಹ ಮಾಧ್ಯಮದಿಂದ, ಅವನ ಮುಖವನ್ನು ಮರದ ಮಾಧ್ಯಮದಿಂದ ರಚಿಸಿದ್ದು, ಅವನ ಎಡಗಡೆ ಪಿಸ್ತೂಲ್ ನೋಡುತ್ತೇವೆ. ಅದನ್ನು ಕಪ್ಪುಬಣ್ಣದ ಲೇಪನ ಮಾಡಿದ್ದಾರೆ. ಹಿಂದೆ ಕಪ್ಪಾದಂತಹ ಪ್ರದೇಶವನ್ನು ಕಾಡಿಗೆ ಹೋಲಿಸಿದ್ದು. ಕರಗಸವನ್ನು ಸಹ ತೋರಿಸಿದ್ದಾರೆ. ಇದು ಲೋಹ ಮಾಧ್ಯಮದಿಂದ ಕೂಡಿದೆ. ಇದರ ಎಡಭಾಗದಲ್ಲಿ ಆನೆಯ ಸೊಂಡಿನ ಆಕಾರದಲ್ಲಿ ಮರದಿಂದ ರಚಿಸಿದ್ದು, ಅದಕ್ಕೆ ಬಣ್ಣವನ್ನು ಲೇಪಿಸಿದ್ದಾರೆ. ಕೆಳಭಾಗದಲ್ಲಿ ಕತ್ತರಿಸಿ ಬಿದ್ದಿರುವಂತಹ ಮರದ ತುಂಡುಗಳಂತೆ ರಚಿಸಿದ್ದು, ಅವುಗಳನ್ನು ಸಹ ಅಂದಾಜಿಸಿದ್ದಾರೆ. ಈ ಮಾಧ್ಯಮದಲ್ಲಿ ಮಾಡಿದಂತಹ ಕಲಾಕೃತಿಗೆ ೧೯೯೩ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯ ಪ್ರಶಸ್ತಿಯನ್ನು ತನ್ನದನ್ನಾಗಿಸಿಕೊಂಡಿದ್ದಾರೆ. ಈ ಮಾಧ್ಯಮದಲ್ಲಿ ಉತ್ತಮ ಸಂಯೋಜನೆಯನ್ನು ಮಾಡಿರುವುದನ್ನು ಕಾಣಬಹುದು.

**ಬಲಾಢ್ಯ**

ಈ ಸಂಕೀರ್ಣ ಮಾಧ್ಯಮವನ್ನು ಪಂಪಾಪತಿ ಎಂಬುವವರು ೨೦೦೮ರಲ್ಲಿ ರಚಿಸಿದ್ದು, ೮x೬ ಅಡಿ ಅಳತೆಯನ್ನು ಹೊಂದಿದೆ.

ಸಂಕೀರ್ಣ ಮಾಧ್ಯಮವನ್ನು ಪ್ಲಾಸ್ಟರ್ ಆಫ್ ಪ್ಯಾರೀಸ್‌ನಿಂದ ರಚಿಸಿದ್ದು, ಮನುಷ್ಯನ ಬಲಾಢ್ಯವನ್ನು ನೋಡಬಹುದು. ಮನುಷ್ಯನ ರುಂಡವಿಲ್ಲದ ದೇಹವನ್ನು ನೋಡಬಹುದು. ಬಲಭಾಗದಲ್ಲಿ ಕೈಯನ್ನು ಮುಷ್ಟಿ ಹಿಡಿದಿದ್ದು, ಮಾಂಸಖಂಡಗಳು ಮತ್ತು ನರಗಳು ಕಾಣುವಂತೆ ರಚಿಸಿದ್ದು, ತನ್ನ ಐದು ಬೆರಳಿನಿಂದ ಮುಷ್ಟಿ ಹಿಡಿದಿರುವುದನ್ನು ಕಾಣಬಹುದು. ಎದೆಯಭಾಗ ಮತ್ತು ಎಡಗೈಯಲ್ಲಿ ಮುಷ್ಠಿಯ ತುಂಬ ಏನನ್ನು ಹಿಡಿದ ಹಾಗೆ ರಚಿಸಿದ್ದು, ನರಗಳು ಕಾಣಿಸುತ್ತಿರುವುದನ್ನು ಕಾಣುತ್ತೇವೆ. ಮತ್ತು ನ್ಯಾಚುರಲ್ ಕಲ್ಲುಗಳನ್ನು ಹಿಡಿದು ನಿಂತಿರುವುದನ್ನು ಕಾಣಬಹುದು. ಸಂಕೀರ್ಣ ಮಾಧ್ಯಮದ ಹಿಂದಿನ ಭಾಗಕ್ಕೆ ಹಳದಿ ಬಣ್ಣವನ್ನು ಲೇಪಿಸಿದ್ದಾರೆ. ಈ ಸಂಕೀರ್ಣ ಮಾಧ್ಯಮ ಚಿತ್ರವನ್ನು ಸಾಧಾರಣವಾಗಿ ರಚಿಸಿದರೂ ಸಹ ಆ ಕಲಾಕೃತಿಯ ಜೀವ ತುಂಬಿರುವಂತೆ ಕಂಡುಬರುತ್ತದೆ. ಒಟ್ಟಾರೆಯಾಗಿ ಈ ಕಲಾಕೃತಿಯನ್ನು ಸುಂದರವಾಗಿ ರಚಿಸಿದ್ದಾರೆ.

ಅನ್‌ಟೈಟಲ್

ಸಂಕೀರ್ಣ ಮಾಧ್ಯಮದಲ್ಲಿ ರಚಿಸಿದಂತೆ ಈ ಭಿತ್ತಿಯು ಮೈಸೂರಿನ ಕವಾಕಾಲೇಜಿನಲ್ಲಿ ೨x೨½ ಅಡಿ ಅಳತೆಯನ್ನು ಹೊಂದಿದ್ದು, ೨೦೧೦ರಲ್ಲಿ ರಚಿಸಿದ್ದಾರೆ.

ಈ ಸಂಕೀರ್ಣ ಮಾಧ್ಯಮದಲ್ಲಿ ರಚಿಸಿದ್ದು, ಫೈಬರ್ ಮಾಧ್ಯಮದಲ್ಲಿ ರಚಿಸಿದ್ದು, ಹಿಂದೆ ಬಣ್ಣದಿಂದ ಮುಖವನ್ನುರಚಿಸಿರುವುದನ್ನು ಕಾಣುತ್ತೇವೆ. ಕಣ್ಣನ್ನು ಅತಿ ಸುಂದರವಾಗಿ ಮತ್ತು ಕೂದಲಿನ ಭಾಗವನ್ನು ಕಪ್ಪುಬಣ್ಣದಲ್ಲಿ ರಚಿಸಿದ್ದು, ಹಿಂದೆ ಭಾವಚಿತ್ರಗಳನ್ನು ಅಂಟಿಸಿರುವುದನ್ನು ಕಾಣುತ್ತೇವೆ. ಈ ಚಿತ್ರದಲ್ಲಿ ಒಬ್ಬ ವ್ಯಕ್ತಿಯ ಮುಖವನ್ನು ಹಿಂದಿನಿಂದ ಎರಡು ಕೈಗಳಿಂದ ಜೋರಾಗಿ ಅಪ್ಪಿಕೊಂಡಂತೆ ಕಾಣುತ್ತೇವೆ.

ಬಲಗೈಯಲ್ಲಿ ಅವನ ಬಾಯಿಯ ಮೇಲೆ ಎಡಗೈಯನ್ನು ಅವನ ಎದೆಯ ಮೇಲೆ ಇಟ್ಟಿರುವುದನ್ನು ಕಾಣುತ್ತೇವೆ. ಇಲ್ಲಿ ಕಲಾವಿದನು ತನ್ನ ಮನಸ್ಸಿನ ಭಾವನೆಗಳಿಗೆ ಸಂಬಂಧಿಸಿದಂತೆ ಅನೇಕ ಮಾಧ್ಯಮಗಳನ್ನು ಒಂದರಲ್ಲಿ ಸಂಯೋಜನೆ ಮಾಡಿ ರಚನೆ ಮಾಡಿದ್ದಾರೆ. ಇದರ ಹಿನ್ನಲೆಯಲ್ಲಿ ಬಿಳಿ ಮತ್ತು ಹಳದಿ ಬಣ್ಣದ ಮಿಶ್ರಣದಿಂದ ಕೂಡಿದಂತಹ ಲೇಪನವನ್ನು ಮಾಡಿದ್ದಾರೆ. ಒಟ್ಟಾರೆ ಸಂಯೋಜನೆಯು ಉತ್ತಮ ರೀತಿಯಲ್ಲಿದೆ ಮತ್ತು ಜನರನ್ನು ಆಕರ್ಷಿಸುವಂತಿದೆ ಎಂದು ಹೇಳಬಹುದಾಗಿದೆ.

ಗಣಪತಿ

ಈ ಸಂಕೀರ್ಣ ಮಾಧ್ಯಮವನ್ನು ನಾಗಭೂಷಣ ಮತ್ತು ಮಧುಸೂದನ ಎಂಬುವವರು ೧೦x೧೫ ಅಡಿ ಅಳತೆಯನ್ನು ಹೊಂದಿದ್ದು. ಟೆರ್ರಾಕೋಟ ಮತ್ತು ಮೆಟಲ್ ಮಾಧ್ಯಮದಿಂದ ರಚಿಸಿದ್ದಾರೆ.

ಈ ಕಲಾಕೃತಿಯಲ್ಲಿ ಮೆಟಲ್‌ನಿಂದ ಗಣಪತಿಯ ಮುಖವನ್ನು ರಚಿಸಿದ್ದು, ಸುಂದರವಾಗಿ ಕಣ್ಣು ಮತ್ತು ಸೊಂಡಿಲನ್ನು ಬಲಗಡೆಗೆ ತಿರುಗಿಸಿರುವುದನ್ನು ಕಾಣುತ್ತೇವೆ. ತನ್ನ ಬಲಗೈಯನ್ನು ಆಶೀರ್ವದಿಸುವಂತೆ ಹಿಡಿದಿದ್ದು ಎಡಗೈಯಲ್ಲಿ ಹಣ್ಣನ್ನು ಹಿಡಿದಿದ್ದಾನೆ. ಕಿವಿಗಳನ್ನು ದೊಡ್ಡದಾಗಿ ಕಿರೀಟವನ್ನು ಸಹ ರಚಿಸಿರುವುದನ್ನು ಕಾಣುತ್ತೇವೆ. ಅದರ ಸುತ್ತಲೂ ಟೆರ್ರಾಕೋಟಾದಿಂದ ರಚಿಸಿದಂತಹ ಮರ, ಮರದಲ್ಲಿನ ಕೊಂಬೆಗಳು ಎಲೆಗಳನ್ನು ರಚಿಸಿದ್ದು, ಕೆಳಭಾಗದಲ್ಲಿ ಅಂಕುಡೊಂಕಿನಿಂದ ರಚಿತವಾದ ಟೆರ್ರಾಕೋಟದ ಸಾಲುಗಳನ್ನು ನೋಡಬಹುದು. ಅದರ ಬಲಭಾಗದಲ್ಲಿ 'ವಿ' ಆಕೃತಿಯಲ್ಲಿ ಹೂವಿನಂತೆ ರಚನೆ ಮಾಡಿರುವುದು ಕಂಡುಬರುತ್ತದೆ. ಒಟ್ಟಾರೆಯಾಗಿ ಈ ಕಲಾಕೃತಿಯಲ್ಲಿ ಸಂಯೋಜನೆ ಮುಖ್ಯವಾಗಿದೆ. ಅಲ್ಲದೇ ಎರಡು ಮಾಧ್ಯಮಗಳನ್ನು ಬಳಸಿಕೊಂಡು ರಚನೆಮಾಡಿರುವುದರಿಂದ ಇಲ್ಲಿ ಇಬ್ಬರ ಮನಸ್ಸಿನಲ್ಲಿರುವ ಭಾವನೆಗಳನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ.

ಪರಿಸರ-೧

ಈ ಸಂಕೀರ್ಣ ಮಾಧ್ಯಮದಲ್ಲಿ ರಚಿಸಿದ ಕಲಾಕೃತಿಯ ಯುಸಫ್ ಅರಕ್ಕಲ್ ರವರು ಬೆಂಗಳೂರಿನ ನಾರಾಯಣ ಹೃದಯಾಲಯ ಆಸ್ಪತ್ರೆಯಲ್ಲಿ ೨೦x೧೦ ಅಡಿ ಅಳತೆಯ ದೊಡ್ಡ ಇನ್‌ಸ್ಟಾಲೇಷನ್ ಮಾಡಿದ್ದರೂ ಕೂಡಾ ಅದು ಒಂದು ಭಿತ್ತಿಗೆ ಇರುವುದರಿಂದ ಭಿತ್ತಿಶಿಲ್ಪವೆಂದು ಭಾವಿಸಿದ್ದೇನೆ.



ಅನ್‌ಟೈಟಲ್



ಪರಿಸರ–೧



ಪರಿಸರ–೨

ಸೂರ್ಯನನ್ನು ರಚಿಸಿದ್ದು, ಕಿರಣಗಳು ಭೂಮಿಯ ಕಡೆಗೆ ಬೀಳುವಂತೆ ರಚಿಸಿ, ಅದರಲ್ಲಿ ಮನುಷ್ಯನಿಗೆ ಬೇಕಾಗುವ ಆಗು ಹೋಗುಗಳನ್ನು ಸಂಪೂರ್ಣವಾಗಿ ಇಲ್ಲಿ ರಚಿಸಿದ್ದು, ಇದು ಆಸ್ಪತ್ರೆಯಲ್ಲಿ ರಚಿಸಿರುವುದರಿಂದ ಅದಕ್ಕೆ ಸಂಬಂಧಿಸಿದ್ದಾಗಿದೆ. ಇಲ್ಲಿ ಜಾಮಿತಿಯ ಆಕಾರಗಳನ್ನು ಬಳಸಿಕೊಂಡು ಅದರ ಮೇಲೆ ಹೂವು, ಎಲೆ, ಗಿಡ, ಬಿಲ್ಲು, ಬಾಣ ವಿವಿಧ ರೀತಿಯ ಚಿಹ್ನೆಗಳನ್ನು ಕಾಣುತ್ತೇವೆ. ತಾಮ್ರ ಬಣ್ಣ ಮತ್ತು ಬಂಗಾರದ ಬಣ್ಣದಿಂದ ರಚಿತವಾಗಿ ಹಿನ್ನೆಲೆಯನ್ನು ನೀಲಿ ಮತ್ತು ಹಸಿರು ಬಣ್ಣದಿಂದ ರಚಿಸಿದ್ದಾರೆ.

ಪರಿಸರ-೨

ಈ ಸಂಕೀರ್ಣ ಮಾಧ್ಯಮವನ್ನು ವೆಂಕಟಚಲಪತಿಯವರು ೩೦x೧೫ ಅಳತೆಯ ಪರಿಸರ ಚಿತ್ರವನ್ನು ವಿವಿಧ ಮಾಧ್ಯಮಗಳನ್ನು ಬಳಸಿಕೊಂಡು ರಚಿಸಿದ್ದಾರೆ.

ಈ ಕಲಾಕೃತಿಯಲ್ಲಿ ಪರಿಸರಕ್ಕೆ ಸಂಬಂಧಿಸಿದ್ದಂತೆ ಸೂರ್ಯನನ್ನು ರಚಿಸಿದ್ದು, ಅದರ ಕೆಳಭಾಗದಲ್ಲಿ ಚಿಕ್ಕ ಮತ್ತು ದೊಡ್ಡದಾದಂತ ಮೂರು ಪಟ್ಟಿಗಳನ್ನು ಕಾಣಬಹುದು. ಮಧ್ಯದಲ್ಲಿ ನಾಲ್ಕು ಮರಗಳನ್ನು ರಚಿಸಿದ್ದು, ಅದರ ಕೆಳಭಾಗದಲ್ಲಿ ನೀರಿನ ಅಲೆಗಳಂತೆ ರಚಿಸಿದ್ದಾರೆ. ಎಡಭಾಗದಲ್ಲಿ ಉರಿಯುತ್ತಿರುವಂತ ಬೆಂಕಿಯ ಹಾಗೆ ತೋರಿಸಿದ್ದು ಮೇಲ್ಭಾಗದಲ್ಲಿ ಆಕಾಶದಲ್ಲಿ ಮೋಡಗಳಿದ್ದಂತೆ ರಚಿಸಿದ್ದಾರೆ. ಅದರ ಕೆಳಭಾಗದಲ್ಲಿ ಸುರುಳಿ ಆಕೃತಿಯಂತೆ ಸುತ್ತುತ್ತಾ ಕೆಳಗೆ ಬಂದಂತೆಲ್ಲಾ ಚೂಪಾಗಿ ಕಾಣಿಸುತ್ತದೆ. ಈ ಸಂಯೋಜನೆ ತುಂಬ ಸರಳವಾಗಿದ್ದರೂ ಅದರಲ್ಲಿರುವ ವಿಷಯ ದೊಡ್ಡದಾಗಿದೆ.

ಯೇಸು ಕ್ರೈಸ್ತ

ಈ ಮ್ಯೂರಲನ್ನು ಆರ್.ಎಂ. ಹಡಪದರವರು ಧರ್ಮಾರಾಂ ಕಾಲೇಜಿನ ಆವರಣದಲ್ಲಿ ಭಿತ್ತಿಯಾಗಿದೆ.

ಆರ್.ಎಂ.ಹಡಪದರವರು ರಾಜಸ್ಥಾನದ ಬನಸ್ಥಾಲಿಯಲ್ಲಿ ಭಿತ್ತಿಚಿತ್ರ ತರಬೇತಿ ಪಡೆದು ಬಂದ ಮೇಲೆ ಬೆಂಗಳೂರಿನ ಕ್ರೈಸ್ತ ಮತದ ಧರ್ಮಾರಾಂ ಕಾಲೇಜಿಗೆ ಮಿಶ್ರ ಮಾಧ್ಯಮದ ಮ್ಯೂರಲ್ ರಚಿಸಿರುವುದನ್ನು ಕಾಣುತ್ತೇವೆ. ಹಲಗೆಯ ಮೇಲೆ ಬಟ್ಟೆ ಅಂಟಿಸಿ ಅದಕ್ಕೆ ಬಣ್ಣ ಹಚ್ಚಿ ಗಾಜಿನ ವಿವಿಧಾಕಾರದ ತುಂಡುಗಳು ಕನ್ನಡಿ ತುಂಡುಗಳು ಚಿನ್ನ, ಬೇಳ್ಳಿ, ಮಿಂಚು, ಕಾಗದ ಇವುಗಳನ್ನು ಅಂಟ್ಟಿಸಿ ಗಾಜುಗಳು ಇತ್ಯಾದಿ. ವಸ್ತುಗಳನ್ನುರ ಬಳಸಿಕೊಂಡು ಈ ಭಿತ್ತಿಯನ್ನು ಪೂರ್ಣಗೊಳಿಸಿದ್ದಾರೆ. ವಿವಿಧ ಬಣ್ಣಗಳನ್ನು ಇಲ್ಲಿ ಕಾಣುತ್ತದೆ. ಕಮಲದ ಮೇಲೆ ನಿಂತಿರುವ ಯೇಸು ಅದರ ಎಡ ಬಲ ಎರಡು ಕಡೆಗಳಲ್ಲಿ ಜನರು ನಮಸ್ಕರಿಸುತ್ತಿರುವುದನ್ನು ಕಾಣುತ್ತೇವೆ. ಹಿನ್ನೆಲೆಯಲ್ಲಿ ಕಪ್ಪು ಬಣ್ಣದಿಂದ ಲೇಪನ ಮಾಡಿದ್ದಾರೆ. ಒಟ್ಟಾರೆಯಾಗಿ ಈ ಕಲಾಕೃತಿಯಲ್ಲಿ ಸಂಯೋಜನೆಯು ಉತ್ತಮವಾಗಿದೆ ಎಂದು ಹೇಳಬಹುದು.

ರಚನಾ ವಿಧಾನ

ಈ ಮಾಧ್ಯಮದ ಕುರಿತು ಹೀಗೆ ಎಂದು ವಿವರಿಸುವುದು ಕಷ್ಟವಾಗುತ್ತದೆ. ಏಕೆಂದರೆ ಕಲಾವಿದನು ತನ್ನ ಮನಸ್ಸಿನ ಭಾವನೆಗಳಿಗೆ ಮತ್ತು ವಿಷಯಕ್ಕೆ ಅನುಗುಣವಾಗಿ ಸಂಯೋಜನೆಯನ್ನು ಮಾಡುತ್ತಾನೆ. ಸಂಕೀರ್ಣ ಮಾಧ್ಯಮಗಳಲ್ಲಿ ಯಾವುದೇ ಒಂದು ಕಲಾಕೃತಿಯನ್ನು ರಚನೆ ಮಾಡುವಾಗ ಅನೇಕ ಬೇರೆ ಬೇರೆ ರೀತಿಯಲ್ಲಿ

ವಸ್ತುಗಳನ್ನು ಅಂಟಿಸಿ ಆಕರ್ಷಣೆಯಾಗುವಂತೆ ಸಂಯೋಜನೆ ಮಾಡುತ್ತಾರೆ. ಆಧುನಿಕ ಯುಗದ ಕಲಾವಿದನ ಮನಸ್ಸಿನ ಆಲೋಚನಾ ಶಕ್ತಿಗೆ ಯಾವುದೇ ಕಾರ್ಯವನ್ನು ಮಾಡಬೇಕಾದರೆ ಅವನಲ್ಲಿರುವಂತೆ ಸೃಜನಾತ್ಮಕತೆಯ ತೋರಿಸುತ್ತಾರೆ. ಬಳಸುವ ಪರಿಕರಗಳು:- ಬಣ್ಣ, ಕಟ್ಟಿಗೆ, ಲೋಹ, ಇನ್ನಿತರ ವಸ್ತುಗಳನ್ನು ಉಪಯೋಗಿಸಿಕೊಳ್ಳುತ್ತಾರೆ. ಹೀಗು ಆಧುನಿಕ ಯುಗದಲ್ಲಿ ಅನೇಕ ಕಲಾವಿದರ ವಿವಿಧ ಮಾಧ್ಯಮಗಳನ್ನು ಉಪಯೋಗಿಸಿಕೊಂಡು ತನ್ನದೇ ಆದಾ ವಿಭಿನ್ನ ಶೈಲಿಯಲ್ಲಿ ಸಂಕೀರ್ಣ ಮಾಧ್ಯಮದ ಕಲಾಕೃತಿಗಳನ್ನು ರಚಿಸುತ್ತಿದ್ದಾರೆ.

ಕಲಾವಿದನು ತನ್ನ ವಿಷಯಕ್ಕೆ ಸಂಬಂಧಪಟ್ಟಂತೆ ಪೂರಕವಕಾದ ಸಾಮಗ್ರಿಗಳನ್ನು ಬಳಸಿಕೊಂಡು ಕೃತಿ ರಚನೆ ಮಾಡಬಹುದು, ಇಂದು ಈ ಮಾಧ್ಯಮವು ಅತಿ ಹೆಚ್ಚು ಪ್ರಚಲಿತದಲ್ಲಿರುವುದು ಕಾರಣ ತಾಜ್ಯವಸ್ತುಗಳನ್ನು ಕಲಾವಿದ. ತನ್ನ ಕೃತಿರಚನೆ ಬಳಸಿಕೊಳ್ಳುವುದರ ಮೂಲಕವಾಗಿ ತಮ್ಮಲ್ಲಿರುವ ಅಭಿವ್ಯಕ್ತಿ ಸಾಮರ್ಥ್ಯವನ್ನು ಓರೆಗೆ ಹಚ್ಚಬಹುದಾಗಿದೆ.

ಇನ್ನಿತರ ಮಾಧ್ಯಮಗಳು

ಶಿಲೆ ಮಾಧ್ಯಮದ ಭಿತ್ತಿಶಿಲ್ಪ

ಶಿಲಾ ಮಾಧ್ಯಮ ಎಂದಾಕ್ಷಣದಲ್ಲಿ ಪ್ರಪಂಚದಲ್ಲಿಯೇ ಅತ್ಯಂತ ಪುರಾತನವಾದ ಮಾಧ್ಯಮ, ಭಿತ್ತಿಚಿತ್ರಕಲೆಯ ನಿದರ್ಶನಗಳೆಂದರೆ ಶಿಲೆಯ ಮೇಲೆ ರಚನೆಯಾದ ಚಿತ್ರಗಳೇ ಆಗಿವೆ.

ಭಿತ್ತಿಚಿತ್ರ ರಚನಾ ಮಾಧ್ಯಮದಲ್ಲಿ ಶಿಲೆ ಮೊದಲ ಮಾಧ್ಯಮವಾಗಿದೆ ಎನ್ನಬಹುದು. ಪ್ರಾಚೀನ ಕಾಲದಲ್ಲಿ ಮಾನವನು ಶಿಲಾಶ್ರಯಗಳು, ಶಿಲಾಗುಹೆಗಳು, ಬಯಲು ಬಂಡೆಗಳ ಮೇಲೆ ಭಿತ್ತಿಚಿತ್ರಗಳನ್ನು ರಚಿಸಿದ್ದಾನೆ. ಜಗತ್ತಿನ ವಿವಿಧ ಕಡೆಗಳಲ್ಲಿ ಇಂತಹ ಭಿತ್ತಿಶಿಲ್ಪಗಳಿವೆ. ಆಸ್ಟ್ರೇಲಿಯಾ ಮುಂತಾದ ಇತರ ಅನೇಕ ದೇಶಗಳಲ್ಲಿ ಶಿಲೆ ರಚನೆಯಾದ ಭಿತ್ತಿಚಿತ್ರಗಳಿವೆ. ಭಾರತದಲ್ಲೂ ಪ್ರಾಗೈತಿಹಾಸಿಕ ಕಾಲ ಭಿತ್ತಿಚಿತ್ರಗಳು ಶಿಲೆಯ ಮೇಲೆ ರಚನೆಯಾಗಿರುವುದು ಕಾಣುತ್ತೇವೆ. ಪ್ರಾಗೈತಿಹಾಸ ಕಾಲದ ಶಿಲೆ ಮೇಲಿನ ಭಿತ್ತಿಚಿತ್ರಗಳಿಗೆ ಭಾರತವೇ ಮೊದಲ ಸ್ಥಾನದಲ್ಲಿದೆ.

ಭಾರತದಲ್ಲಿ ಬೆಂಬೆಟ್ಕಾ, ಮಿರ್ಜಾಪೂರ, ವಾರಣಾಸಿ, ಪಚ್ಚಮರಿ ರೈಜಿನ್, ಹೋಷಂಗಾಬಾದ್, ರಾಯಘಡ, ಓರಿಸ್ಸಾ, ಬಿಹಾರ, ಎಡಕಲ್ಲು, ಕರ್ನೂಲ, ಗ್ವಾಲಿಯಾರ ಸಾಗರ ಹೀಗೆ ಇನ್ನೂ ಅನೇಕ ಸ್ಥಳಗಳಲ್ಲಿ ಶಿಲೆಯ ಮೇಲಿನ ಭಿತ್ತಿಚಿತ್ರಗಳು ಕಂಡುಬರುತ್ತವೆ. ಕರ್ನಾಟಕದ ಭಾಗದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣಬಹುದಾಗಿದೆ. ಶಿಲಾ ಮಾಧ್ಯಮದ ಮೇಲೆ ಭಿತ್ತಿಚಿತ್ರ ಮಾಡುವಾಗ ಒಂದೇ ವಿಧಾನ ಅನುಸರಿಸದೇ ವಿವಿಧ ರೀತಿಯಲ್ಲಿ ಚಿತ್ರಗಳನ್ನು ರಚನೆ ಮಾಡಲಾಗಿದೆ. ಶಿಲೆಯ ಮೇಲೆ ಚೂಪಾದ ಸಾಧನದಿಂದ ಗೀರು, ಇಲ್ಲವೇ ಕುಟ್ಟಿ ರಚಿಸಿದ ಚಿತ್ರಗಳಲ್ಲದೇ ಇತರೆ ಚಿತ್ರಗಳು ಸಹ ಕಂಡುಬರುತ್ತವೆ.

ಹೀಗೆ ಮುಂದುವರೆದು ಕೊಂಡುಹೋದಾಗ ಹಾಗೆ ಶಿಲ್ಪಗಳು ರಚನೆಗೊಂಡವು. ಕಾಲಕ್ರಮೇಣವಾಗಿ ಭಿತ್ತಿಶಿಲ್ಪಗಳನ್ನು ರಚನೆ ಮಾಡತೊಡಗಿದರು. ನಂತರದಲ್ಲಿ ಆಧುನಿಕ ಕಲಾವಿದರು ಕಲಾ ಮಾಧ್ಯಮದಲ್ಲಿ ಅನೇಕ

ನವೀನತೆಯಿಂದ ಕೂಡಿದ ಕಲಾಕೃತಿಗಳನ್ನು ರಚಿಸುವುದರ ಜೊತೆಗೆ ತಮ್ಮಲ್ಲಿರುವ ಮನಸ್ಸಿನ ಭಾವನೆಗಳು ಭಿನ್ನ ವಿಭಿನ್ನವಾಗಿ ತಮ್ಮ ಕಲಾಕೃತಿಗಳಲ್ಲಿ ರಚನೆ ಮಾಡುತ್ತಿರುವುದನ್ನು ಕಾಣುತ್ತೇವೆ.

ಶಿಲಾ ಮಾಧ್ಯಮದ ರಚನೆಯಲ್ಲಿ ಮೊದಲಿಗೆ ಕಲ್ಲಿನ ಅಳತೆಯನ್ನು ನೋಡಿಕೊಂಡು ಅದನ್ನು ಅವರಿಗೆ ಬೇಕಾದ ಆಕಾರಕ್ಕೆ ತಂದ ಮೇಲೆ ಒಂದು ಪೇಪರ್ ಮೇಲೆ ಡ್ರಾಯಿಂಡ್ ಶೀಟ್ ಕರುಡು ಚಿತ್ರವನ್ನು ರಚನೆ ಮಾಡಿಕೊಳ್ಳುತ್ತಾರೆ. ನಂತರದಲ್ಲಿ ಅದನ್ನು ಅವರು ನುಣುಪು ಮಾಡಿಕೊಂಡ ಕಲ್ಲಿನ ಮೇಲೆ ಬಳಪ ಅಥವಾ ಕಲ್ಲಿದ್ದಲಿನಿಂದ ರೇಖೆಗಳನ್ನು ಎಳೆದು ನಂತರದಲ್ಲಿ ಅವರಿಗೆ ಬೇಡವಾದ ಭಾಗಗಳನ್ನು ಸ್ವಲ್ಪ ಸ್ವಲ್ಪ ಕೆತ್ತನೆಯನ್ನು ಮಾಡುತ್ತಾ ಅವರ ಮನಸ್ಸಿಗೆ ಹಿಡಿಸುವ ತನಕ ಕೆತ್ತನೆ ಮಾಡುತ್ತಿರುತ್ತಾರೆ. ಕೊನೆಯಲ್ಲಿ ಅದಕ್ಕೆ ಪಾಲಿಶ್ ಮಾಡಿ ಕೆಲವೊಮ್ಮೆ ಕಪ್ಪು ಬಣ್ಣ ಹಚ್ಚುತ್ತಾರೆ.

ಇನ್ನು ಕೆಲವು ಅನುಭವಸ್ಥ ಆಧುನಿಕ ಕಲಾವಿದರು ಕರಡು ಚಿತ್ರ ರಚಿಸಿಕೊಳ್ಳದೇ ಶಿಲೆಯಲ್ಲಿ ಅವರಿಗೆ ಕಾಣುವ ಯಾವುದೇ ಒಂದು ಆಕಾರವನ್ನು ಕೆತ್ತುತ್ತಾ ತಮ್ಮ ಶಿಲಾಕೃತಿಯನ್ನು ಪೂರ್ಣಗೊಳಿಸುವರು. ಹೀಗೆ ವಿವಿಧ ರೀತಿಯಲ್ಲಿ ಭಿತ್ತಿಶಿಲ್ಪಗಳನ್ನು ಶಿಲಾಮಾಧ್ಯಮದಲ್ಲಿ ರಚಿಸುತ್ತಿರುವುದನ್ನು ಕಾಣುತ್ತೇವೆ. ಇದಕ್ಕೆ ಬಳಸುವ ಪರಿಕರಗಳು ಕಲ್ಲು, ಉಳಿ, ಸುತ್ತಿಗೆ, ಗುಂಡು ಮತ್ತು ಚಪ್ಪಟೆ, ಚೂಪಾದ, ಆಕಾರಗಳಿಂದ ಕೂಡಿರುವಂತ ವಸ್ತುಗಳು, ಪಾಲಿಶ್‌ಪೇಪರ್, ಕಪ್ಪುಬಣ್ಣ ಇತ್ಯಾದಿ.

ಶಿಲಾಮಾಧ್ಯಮ ಕರ್ನಾಟಕದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿ ರಚನೆಯಾಗಿದ್ದರು ಸಹ ಶಿಲಾಮಾಧ್ಯಮದ ಭಿತ್ತಿಚಿತ್ರಗಳು ಬಹಳ ಕಡಿಮೆ ಪ್ರಮಾಣದಲ್ಲಿ ದೊರೆಯುವುದನ್ನು ನಾವು ಕಾಣಬಹುದು.

**ದೃಶ್ಯ ಕಲೆಗಳು**

ಶಿಲೆ ಮಾಧ್ಯಮದ ಭಿತ್ತಿಶಿಲ್ಪವನ್ನು ಬೆಂಗಳೂರಿನ ಕನ್ನಡ ಭವನದ ಪ್ರವೇಶಬಾಗಿಲು ಮುಂದೆ ಭಿತ್ತಿಗೆ ರಚಿಸಿದ್ದು, ೧೫x೧೨ ಅಡಿ ಅಳತೆಯನ್ನು ಹೊಂದಿರುತ್ತದೆ.

ಶಿಲಾಮಾಧ್ಯಮದಲ್ಲಿ ದೃಶ್ಯಕಲೆಗಳಿಗೆ ಸಂಬಂಧಿಸಿ ಎಲ್ಲಾ ಅಂಶಗಳು ಇಲ್ಲಿ ಒಳಗೊಂಡಿವೆ. ಈ ಶಿಲ್ಪದ ಕೆಳಗಿನ ಮಧ್ಯಭಾಗದಲ್ಲಿ ಸಿಂಹದ ಜೊತೆ ಹೋರಾಡುತ್ತಿರುವುದನ್ನು ನೋಡುತ್ತೇವೆ. ಸಿಂಹವು ಘರ್ಜಿಸುತ್ತ ತನ್ನ ಕಾಲುಗಳಲ್ಲಿ ಅವನನ್ನು ಗೀಚುತ್ತಿರುವುದನ್ನು ಕಾಣುತ್ತೇವೆ. ಆ ವ್ಯಕ್ತಿಯ ಅದರ ವಿರುದ್ಧ ಹೋರಾಟ ಮಾಡುತ್ತಿರುವುದನ್ನು ಕಾಣುತ್ತೇವೆ. ಅದರ ಎಡಭಾಗದಲ್ಲಿ ವಿಜಯನಗರ ಕಾಲದ ಮುದ್ರೆಯನ್ನು ನೋಡಬಹುದು. ಅದರ ಕೆಳಭಾಗದಲ್ಲಿ ಹಂಸಗಳು ಎಡಭಾಗದಲ್ಲಿ ಕೃಷ್ಣನು ತನ್ನ ಎರಡು ಕೈಗಳಲ್ಲಿ ಸರ್ಪವನ್ನು ಹಿಡಿದಿರುವುದು, ಅದರ ಪಕ್ಕದಲ್ಲಿ ಆನೆಯ ತನ್ನ ಕಾಲುಗಳನ್ನು ಮಡಚಿಕೊಂಡು ನಮಸ್ಕರಿಸುತ್ತಿರುವುದನ್ನು ಕಾಣುತ್ತೇವೆ. ಅದರ ಮೇಲ್ಭಾಗದಲ್ಲಿ ಇಬ್ಬರು ನೃತ್ಯಪಟುಗಳು ನೃತ್ಯವನ್ನು ಮಾಡುತ್ತಿದ್ದು, ಅದರ ಮೇಲೆ ವಿವಿಧ ಆಕಾರದ ವಿನ್ಯಾಸಗಳನ್ನು ಕಾಣಬಹುದು. ಅವರ ಪಕ್ಕದಲ್ಲಿ ಬಣ್ಣ ಕಲಿಸುವ ತಟ್ಟೆ ಮತ್ತು ಎರಡು ಕುಂಚಗಳನ್ನು ನೋಡಬಹುದು. ಇದಕ್ಕೆ ಕಪ್ಪು ವರ್ಣವನ್ನು ಲೇಪಿಸಿದ್ದಾರೆ.

ಅದರ ಮೇಲ್ಭಾಗದಲ್ಲಿ ಎರಡು ದೊಡ್ಡ ಮುಖವಾಡಗಳು ಇವುಗಳಿಗೆ ಕಪ್ಪುಬಣ್ಣ ಲೇಪಿಸಿದ್ದಾರೆ. ಅದರ ಎಡಭಾಗದಲ್ಲಿ ಎರಡು ಹೂವುಗಳು ಅದರ ಮೇಲ್ಭಾಗದಲ್ಲಿ ತಬ್ಬಲಗಳು ಮತ್ತು ವೀಣೆ. ಅದರೆ ಮೇಲೆ

ಸೂರ್ಯ ಮೇಲಿನ ಮಧ್ಯಭಾಗದಲ್ಲಿ ಚಿಹ್ನೆಯನ್ನು ಕಾಣಬಹುದು. ಅದರ ಕೆಳಭಾಗದಲ್ಲಿ ಯಕ್ಷಗಾನಕ್ಕೆ ಸಂಬಂಧಿಸಿದ ಮುಖವಾಡ ಕಿರೀಟವನ್ನು ಅದರ ಪಕ್ಕದಲ್ಲಿ ಹಸ್ತಪ್ರತಿಗೆ ಸಂಬಂಧಿಸಿದಂತೆ ಅದರ ಮೇಲ್ಭಾಗದಲ್ಲಿ ಒಂದು ಬಿಂದಿಗೆ ಇಟ್ಟು, ಅದರ ಒಳಗೆ ಪಕ್ಷಿಯ ಗರಿಯನ್ನು ಹಾಕಿದ್ದು, ಚಿಕ್ಕ ಗಾತ್ರದ ಗಣಪತಿಯನ್ನು ಕಾಣಬಹುದು. ಅದರ ಪಕ್ಕದಲ್ಲಿ ದೊಡ್ಡದಾದ ತಂಬೂರಿ ಅದರ ಮೇಲೆ ಒಂದು ವೃತ್ತಾಕಾರವಾಗಿ ಮಾಡಿ ಅದರ ಒಳಗೆ, ಕಣ್ಣು, ಮೂಗು, ಬಾಯಿ ರಚಿಸಿದ್ದು, ಅದರ ಕೆಳಭಾಗದಲ್ಲಿ ನೃತ್ಯದಲ್ಲಿ ನಿರತಳಾದ ಒಂದು ಸುಂದರವಾದ ಸ್ತ್ರೀಯನ್ನು ಕಾಣಬಹುದು. ಅದರ ಪಕ್ಕದಲ್ಲಿ ಹಂಸಗಳು, ಕುಳಿತಿರುವ ಬಸವಣ್ಣನನ್ನು ಕಂಡರೆ, ಅದರ ಕೆಳಭಾಗದಲ್ಲಿ ಸಿಂಹವೊಂದು ಘರ್ಜಿಸುತ್ತಿರುವುದನ್ನು ಕಾಣುತ್ತೇವೆ. ಅದರ ಎಡಭಾಗದಲ್ಲಿ ಒಂದು ಪಕ್ಷಿಯು ನಿಂತಿದ್ದು, ತನ್ನ ಕೊಕ್ಕಿನಿಂದ ಬೆನ್ನನ್ನು ಕುಕ್ಕುತ್ತಿರುವುದನ್ನು ಕಾಣುತ್ತೇವೆ. ಅದರ ಮೇಲೆ ವಿಜಯನಗರದ ಅರಸರ ಕಾಲದ ರಾಜಮುದ್ರೆಯನ್ನು ರಚಿಸಿದ್ದು ಅದರ ಪಕ್ಕದಲ್ಲಿ ಗೆಜ್ಜೆ ತಾಳಗಳನ್ನು ಕಾಣಬಹುದು. ಕೆಳಭಾಗದಲ್ಲಿ ಕುದುರೆಗಳ ಸಾಲುಗಳನ್ನು ಕಾಣಬಹುದು. ಒಟ್ಟಾರೆಯಾಗಿ ಇಲ್ಲಿ ಕರ್ನಾಟಕ ಸಂಸ್ಕೃತಿ ಮತ್ತು ಇತಿಹಾಸವನ್ನು ಈ ಕಲ್ಲಿನ ಮಾಧ್ಯಮದಲ್ಲಿ ಸಂಪೂರ್ಣವಾಗಿ ಕಾಣಬಹುದು. ಅಲ್ಲದೇ ಕಲಾವಿದನು ಅತ್ಯಂತ ಸೂಕ್ಷ್ಮವಾಗಿ ಸಂಯೋಜನೆ ಮಾಡಿರುವುದನ್ನು ಕಾಣುತ್ತೇವೆ.

### ರಚನಾ ವಿಧಾನ

ಮೊದಲು ಶಿಲಾಮಾಧ್ಯಮ ಮಾಡುವಾಗ ವಿನ್ಯಾಸವನ್ನು ಗುರುತು ಮಾಡಿಕೊಳ್ಳಬೇಕು ವಿನ್ಯಾಸ (ಮಾರ್ಕ್‌ಔಟ್) ಎಂದರೆ ಕರುಡ ಚಿತ್ರ. ಯಾವುದೇ ನಿರ್ದಿಷ್ಟವಾದ ಆಕಾರವನ್ನು ಮಾಡಬೇಕಾದರೆ ಕಲ್ಲಿನ ಘನ, ಗಾತ್ರ ಬೇಕಾಗುತ್ತದೆ. ಆದರೆ ಆಧುನಿಕ ಕಲಾಕೃತಿಯನ್ನು ಮಾಡಬೇಕಾದರೆ ಕಲ್ಲಿನ ಸೇಪ್‌ಗೆ ಅನುಗುಣವಾಗಿ ಶಿಲ್ಪಾಕೃತಿಯನ್ನು ರಚನೆ ಮಾಡುತ್ತಾರೆ. ಘನಾಕೃತಿಯನ್ನು ನಮಗೆ ಬೇಕಾದ ರೀತಿಯಲ್ಲಿ ಮೈವಳಿಕೆಯನ್ನು ತೆಗೆದುಕೊಂಡು ಉಬ್ಬು ತಗ್ಗುಗಳ ಯೋಚನೆ ಮಾಡಿ ಕಲ್ಲಿಗೆ ಅನುಗುಣವಾಗಿ ರಚನೆ ಮಾಡಬೇಕಾಗುತ್ತದೆ. ರಚನೆಯಾದ ನಂತರ ಲಿಮಿಟೆಡ್ ಪಾಲಿಶ್ ಮಾಡಬೇಕಾಗುತ್ತದೆ. ಬೇಕಾದ ಪರಿಕರಗಳು:- ಸುತ್ತಿಗೆ, ಉಳಿ, ವಿವಿಧ, ಸಣ್ಣ ಮತ್ತು ದೊಡ್ಡಗಾತ್ರದ ಸಲಕರಣೆಗಳನ್ನು ಉಪಯೋಗಿಸುತ್ತಾರೆ. ಕರ್ನಾಟಕದ ಅನೇಕ ಶಿಲ್ಪಕಲಾವಿದರುಗಳು ನಾನಾ ರೀತಿಯ ಶಿಲ್ಪಗಳನ್ನು ತಯಾರಿಸುತ್ತಿರುವುದು ಕಾಣುತ್ತೇವೆ. ಆದರೆ ಭಿತ್ತಿಶಿಲ್ಪಗಳನ್ನು ರಚಿಸಿರುವುದು ತೀರಾ ಕಡಿಮೆಯಾಗಿದ್ದು ಇತ್ತೀಚ್ಚಿನ ದಿನಗಳಲ್ಲಿ ಬೆಳವಣಿಗೆ ಹೊಂದುತ್ತಿರುವುದನ್ನು ಕಾಣುತ್ತೇವೆ.

### ಅನ್‌ಟೈಟಲ್

ಈ ಸಂಕೀರ್ಣ ಮಾಧ್ಯಮವನ್ನು ವಿರೇಂದ್ರ ಷಾ ರವರು ಗುಲ್ಬರ್ಗಾದ ಹೋಟೆಲ್ ಒಂದರ ಭಿತ್ತಿಯ ಮೇಲೆ ರಚನೆ ಮಾಡಿದ್ದು, ೨೦x೧೫ ಅಡಿ ಅಳತೆಯನ್ನು ಹೊಂದಿದೆ.

ಈ ಕಲಾಕೃತಿಯಲ್ಲಿ ಮೇಲ್ಭಾಗದಲ್ಲಿ ಟೈರ‍್ರಾಕೋಟಾ ಮಾಧ್ಯಮದಿಂದ ರಚಿಸಿದ್ದು, ಅದರ ಕೆಳಭಾಗದಲ್ಲಿ ಕಲ್ಲಿನ ಮತ್ತು ಮಣ್ಣಿನ ಟೈಲ್ಸ್‌ಗಳ ಪೀಸುಗಳು, ಅದರ ಕೆಳಗೆ ದೀಪ ಉರಿಯುತ್ತಿರುವಂತೆ ರಚಿಸಿದ್ದು,

ಅದರ ಪಕ್ಕದಲ್ಲಿ ಟೆರ್ರಾಕೋಟಾ ಮಾಧ್ಯಮದಿಂದ ತಯಾರಿಸಿದಂತಹ ವಿವಿಧ ರೀತಿಯ ವಿನ್ಯಾಸಗಳನ್ನು ಕಾಣುತ್ತೇವೆ. ಕೆಲವೊಂದು ಕಡೆಗಳಲ್ಲಿ ಪ್ಲಾಸ್ಟರ್ ಆಫ್ ಪ್ಯಾರೀಸ್ ಮತ್ತು ಬಣ್ಣದ ಟೈಲ್ಸ್‌ಗಳನ್ನು ಕಾಣಬಹುದಾಗಿದೆ. ಕೆಳಗಿನ ಭಾಗದಲ್ಲಿ ನಾಲ್ಕು ವಿವಿಧ ಮಾಧ್ಯಮದ ವೃತ್ತಾಕಾರಗಳನ್ನು ಕಾಣಬಹುದು. ಅದರ ಎಡ ಮತ್ತು ಬಲ ಕಡೆಗಳಲ್ಲಿ ಟೆರ್ರಾಕೋಟಾದ ಚಿತ್ರಗಳನ್ನು ಭಿತ್ತಿಗಳನ್ನು ಕಾಣಬಹುದು. ಈ ರೀತಿಯ ಸಂಯೋಜನೆಯನ್ನು ಮಾಡುವಾಗ ಕಲಾವಿದನು ತನ್ನ ಮನಸ್ಸೆಲ್ಲವನ್ನು ತನ್ನ ಜೋಡಣೆಯೆಡೆಗೆ ಇಡಬೇಕಾಗುತ್ತದೆ ಎಂದು ವಿರೇಂದ್ರ ಷಾ ರವರು ಹೇಳುತ್ತಾರೆ.

## ಲೋಹ ಮಾಧ್ಯಮ

ಆಧುನಿಕ ಕಲಾವಿದರು ಭಿತ್ತಿಶಿಲ್ಪಗಳ ರಚನೆಗೆ ಬಳಸುವ ಹಲವಾರು ಮಾಧ್ಯಮಗಳಲ್ಲಿ ಲೋಹ ಮಾಧ್ಯಮ ಒಂದಾಗಿದೆ. ಆದರೆ ಇದು ತುಂಬಾ ದುಬಾರಿ ಮಾಧ್ಯಮವಾಗಿರುವುದರಿಂದ ಭಿತ್ತಿಶಿಲ್ಪಕಲೆ ತುಂಬಾ ಕಡಿಮೆ ಪ್ರಮಾಣದಲ್ಲಿ ಕಾಣಿಸಿಕೊಳ್ಳುತ್ತದೆ. ಇದರಿಂದ ಜನಸಾಮಾನ್ಯರಿಗೆ ಇಂತಹ ಮಾಧ್ಯಮದಲ್ಲಿ ಭಿತ್ತಿಚಿತ್ರಗಳು ರಚನೆಯಾಗುವುದು ಬಹಳ ಅಪರೂಪವಾಗಿದೆ.

ಈಜಿಪ್ಟಿಯನ್ನರು ಕ್ರಿ.ಪೂ. ೩ನೇ ಶತಮಾನಕ್ಕೆ ಮೊದಲೇ ಲೋಹ ಫಲಕಗಳ ಮೇಲೆ ಭಿತ್ತಿಚಿತ್ರ ರಚಿಸುತ್ತಿದ್ದರು. ಲೋಹ ಫಲಕದ ಮೇಲೆ ಭಿತ್ತಿಚಿತ್ರ ರಚಿಸಿದ್ದು, ಉತ್ತರ ಕರ್ನಾಟಕದಲ್ಲಿ ಅಮ್ಮಿನಬಾವಿಯ ಪಂಚಲೋಹ ಹಿಂದೆ ಮಠದಲ್ಲಿ ನೋಡಬಹುದಾಗಿದೆ. ಕಬ್ಬಿಣದ ತೆಳುವಾದ ಫಲಕಗಳನ್ನು ಮೇಲ್ಛಾವಣಿಗೆ ಹೊಂದಿಸಿ, ಅವುಗಳ ಮೇಲೆ ವರ್ಣಚಿತ್ರಗಳನ್ನು ರಚಿಸಲಾಗಿದೆ. ಇವುಗಳನ್ನು ಬಿಟ್ಟರೆ ಲೋಹ ಫಲಕದ ಮೇಲೆ ರಚನೆಯಾದ ಭಿತ್ತಿಚಿತ್ರಗಳು ಕರ್ನಾಟಕದಲ್ಲಿ ಇದುವರೆಗೂ ಕಂಡುಬಂದಿಲ್ಲವೆಂದೇ ಹೇಳಬೇಕಾಗುತ್ತದೆ.

ಲೋಹಗಳ ಶೋಧ ಪ್ರಾಚೀನವಾದುದ್ದಾಗಿದೆ. ಅದು ಶಿಲ್ಪಗಳ ಸೃಷ್ಠಿಗೆ ಮಣ್ಣು ಹಾಗೂ ಮರದ ಮಾಧ್ಯಮಗಳ ನಂತರ ಬೆಳಕಿಗೆ ಬಂದಿದೆ. ಮಾನವನು ಈ ಸಮಾಜದಲ್ಲಿ ಪ್ರಾಚೀನ ಕಾಲದಿಂದಲೂ ಶಿಲ್ಪಗಳ ಸೃಷ್ಠಿಗೆ ಲೋಹಗಳನ್ನು ಬಳಸಿಕೊಂಡು ಬಂದಿರುವುದಕ್ಕೆ ಸಾಕಷ್ಟು ನಿದರ್ಶನಗಳು ದೊರೆಯುತ್ತವೆ.

ಭಾರತದಾದ್ಯಂತಲೂ ನಡೆಸಲಾದ ಪ್ರಾಚೀನ ನೆಲೆಗಳಲ್ಲಿನ ಶೋಧಗಳಲ್ಲಿ ಲೋಹದ ಖಡ್ಗ, ಭರ್ಜಿ, ಉಳಿ ಮುಂತಾದ ಆಯುಧ ಉಪಕರಣಗಳು ದೊರಕಿವೆ. ಮಧ್ಯಪ್ರದೇಶದ ಗುಂಗೇರಿಯ ದಕ್ಷಿಣ ತಿನ್ನವಳ್ಳಿ ಹಾಗೂ ಮಸ್ಕಿಗಳಲ್ಲಿ ಹಾಗೆಯೇ ಪ್ರಾಚೀನ ಸಂಸ್ಕೃತಿಯ ನೆಲೆಗಳಾದ ಹರಪ್ಪಾ ಮತ್ತು ಮಹೆಂಜೋದಾರುಗಳಲ್ಲಿ ಬೆಳ್ಳಿ, ಕಂಚು, ಹಿತ್ತಾಳೆ ಹಾಗೂ ಕಬ್ಬಿಣದ ನಿತ್ಯ ಬಳಕೆಯ ಸಾಧನೋಪಕರಣಗಳು ಅಲಂಕಾರದ ವಸ್ತುಗಳು ವಿಗ್ರಹಗಳು ಮತ್ತು ಆಟಿಕೆಗಳು ದೊರಕಿವೆ. ಇದು ಲೋಹ ಮಾಧ್ಯಮದ ಶಿಲ್ಪಕಲೆಯ ವಿಕಾಸದ ಹಂತಗಳನ್ನು ತಿಳಿಸುತ್ತದೆ. ಅದರಲ್ಲಿಯೂ ಕಂಚಿನ ನರ್ತಕಿಯ ವಿಗ್ರಹ ಮತ್ತು ಚಕ್ಕಡಿಗಳು ಕಲಾಪೂರ್ಣ ರಚನೆಗಳಾಗಿವೆ.

ಋಗ್ವೇದ ಕಾಲದಲ್ಲಿಯೂ ಲೋಹಗಳ ಉತ್ಪಾದನೆ ಹಾಗೂ ಬಳಕೆಯು ಇತ್ತೆಂಬುದು ತಿಳಿಯುತ್ತದೆ. ಕ್ರಿ.ಪೂ.ಸುಮಾರು ೩೦೦ರಲ್ಲಿದ್ದ ಸುಶೂತ್ರದಲ್ಲಿ ಅತ್ಯಂತ ನೈಪುಣ್ಯದಿಂದ ತಯಾರಿಸಲಾದ ೧೨೭ ಶಸ್ತ್ರ ಚಿಕಿತ್ಸೆ ಉಪಕರಣಗಳ ಪ್ರಸ್ತಾಪವಿದೆ. ಹೆರೋಡೋಟಸ್ ಮತ್ತು ಕೆಲ್ಸಿಯಸರು ಲೋಹದ ರಥ ಉತ್ಪಾದನೆಯ

ರಾಜ್ಯದ ಸ್ವಾಮ್ಯದಲ್ಲಿದ್ದುದು ಮತ್ತು ಈ ಲೋಹಗಳನ್ನು ಆಭರಣ ಪಾತ್ರೆ ಇತ್ಯಾದಿ ಅಲಂಕಾರಿಕ ಹಾಗೂ ಗೃಹೋಪಯೋಗಿ  ವಸ್ತುಗಳ ತಯಾರಿಕೆಗಾಗಿಯೂ ಆಯುಧ ರಥಾಧಿ ಯುದ್ಧೋಪಕರಣಗಳಿಗಾಗಿಯೇ ಬಳಸಿಕೊಳ್ಳುತ್ತಿದ್ದುದು ತಿಳಿದು ಬರುತ್ತದೆ.

ಪ್ರಾಚೀನ ಭಾರತದಲ್ಲಿ ಮತ್ತು ಸ್ವಾತಂತ್ರ್ಯ ಪೂರ್ವ ಹಾಗೂ ಸ್ವತಂತ್ರ್ಯ ನಂತರದ ಭಾರತದ ಅವಧಿಯಲ್ಲಿ ಚಿನ್ನ, ಬೆಳ್ಳಿಯಂತಹ ಲೋಹಗಳನ್ನು ದೇವತಾ ವಿಗ್ರಹಗಳಿಗಾಗಿ, ನಾಣ್ಯಗಳಿಗಾಗಿ, ಆಭರಣಗಳು ಮತ್ತು ಕಬ್ಬಿಣ ಮುಂತಾದ ಇತರ ಲೋಹಗಳಿಂದ ತಯಾರಿಸಲಾದ ನಿತ್ಯ ಬಳಕೆಯ ವಸ್ತುಗಳಿಗಾಗಿ ಮತ್ತು ಅಲಂಕಾರಿಕ ವಸ್ತುಗಳ ರಚನೆಗಾಗಿ ಬಳಕೆ ಮಾಡುತ್ತಾ ಬಂದಿದ್ದಾರೆ. ವಿವಿಧ ಲೋಹಗಳಲ್ಲಿ ಕುಶಲ ಶಿಲ್ಪಿಗಳು ನಡೆಸಿದ ಪ್ರಯೋಗಗಳಿಂದಾಗಿ ಇಂದು ಲೋಹ ಶಿಲ್ಪಕಲೆಯ ಪರಧಿಯು ವಿಸ್ತಾರವಾದ ಹಾಗೂ ವೈವಿಧ್ಯಮಯತೆಯನ್ನು ಹಾಗೆಯೇ ಲೋಹ ಮಾಧ್ಯಮದಲ್ಲಿಯೂ ಆಕರ್ಷಣೀಯ ಕೇಂದ್ರವಾಗಿದ್ದು ಜನರ ಗಮನ ಸೆಳೆಯುತ್ತದೆ.

ಲೋಹ ಮಾಧ್ಯಮದ ಶಿಲ್ಪಗಳನ್ನು ಮೊದಲಿಗೆ ದೇವಾಲಯಗಳಲ್ಲಿ ಪ್ರಭಾವಳಿಗಳಿಗೆ ಹಾಗೂ ಕಲ್ಲಿನಿಂದ ಮೂರ್ತಿ ಇದ್ದರೆ. ಅದರ ಮೇಲೆ ಮುಖವಾಡ ಚಿತ್ರ ಶಿಲ್ಪಕ್ಕಾಗಿ ಬಳಸುತ್ತಿದ್ದರು. ಈಗಿನ ಆಧುನಿಕ ಕಲೆಯಲ್ಲಿ ಲೋಹ ಶಿಲ್ಪಗಳಲ್ಲಿ ಕೆಲವು ಕಲಾವಿದರು. ತಮ್ಮ ವೃತ್ತಿಯನ್ನಾಗಿಸಿಕೊಂಡು ತಮ್ಮ ನೈಪುಣ್ಯತೆಗಳಿಂದ ಹಲವು ರೀತಿ ಶಿಲ್ಪಗಳನ್ನು ರಚಿಸುತ್ತಿದ್ದಾರೆ. ರೇಖ್‌ಶೀಟು, ತಾಮ್ರದ ಶೀಟು, ಇತ್ತಾಳೆ ಶೀಟುಗಳನ್ನು ಬಳಸಿ ಹಳೆಯ ವಸ್ತುಗಳ ರೀತಿಯಲ್ಲಿ ಶಿಲ್ಪಗಳನ್ನು ರಚಿಸುತ್ತಿರುವುದು ಕಂಡುಬರುತ್ತದೆ. ಇಂತಹ ಚಿತ್ರ ಶಿಲ್ಪದಲ್ಲಿ ಎಸ್.ವಾಸುದೇವ್ ನಂತರ ಜಿ.ಎಸ್.ಶೆಣೈರವರು ಕೂಡಾ ಇಂತಹ ಕೆಲಸದಲ್ಲಿ ತೊಡಗಿಸಿಕೊಂಡಿದ್ದಾರೆ. ನಂತರ ಬೆಂಗಳೂರಿನ ಸ್ಯಾಂಕಿ ಕೆರೆಯ ಹತ್ತಿರ ಇರುವ ಜಿಮ್ ಆರ್ಟ್‌ನಲ್ಲಿ ಲೋಹಮಾಧ್ಯಮ ಚಿತ್ರ ರಚನೆ ಪ್ರಬುದ್ಧತೆಯಿಂದಲೇ ಬೆಳೆಯುತ್ತಿದೆ.

ಮೊದಲು ಉಬ್ಬು ಚಿತ್ರ ಮಣ್ಣಿನಿಂದ ನಿರ್ಮಿಸುತ್ತಿದ್ದರು. ಟೆರ್ರಾಕೋಟಾ ಮ್ಯೂರಲ್ ಇವುಗಳ ಜೋಡಣೆಯಲ್ಲಿ ವ್ಯತ್ಯಾಸವಾದರೆ ಹೊಡೆದು ಹೋದರೆ ಮರುಜೋಡಣೆ ಕಷ್ಟವೆನಿಸಿ ನಂತರ ಫೈಬರ್ ಗ್ಲಾಸ್‌ನಲ್ಲಿ ನಿರ್ಮಿಸಿದರೆ ಹೊರಾಂಗಣದಲ್ಲಿ ಕಾಲಕ್ರಮೇಣ ಬಣ್ಣ ಹೋಗುವ ಸಾಧ್ಯತೆ ಹೆಚ್ಚು ಹಾಗಾಗಿ ಇತ್ತೀಚಿನ ದಿನಗಳಲ್ಲಿ ಈ ರೀತಿಯ ಮೆಟಲ್ ಅಥವಾ ಲೋಹ ಶಿಲ್ಪವನ್ನು ಕಲಾರಸಿಕರು ಇಷ್ಟಪಡುತ್ತಾರೆ. ಹಾಗಾಗಿ ಲೋಹದ ಭಿತ್ತಿಶಿಲ್ಪಗಳು ಅಲ್ಲಲ್ಲಿ ಕಂಡುಬರುತ್ತದೆ.

ಜೀವನರಂಗ

ಭಿತ್ತಿಶಿಲ್ಪವನ್ನು ಎಸ್.ಜಿ.ವಾಸುದೇವರವರು ರಚಿಸಿದನ್ನು ಕಾಣಬಹುದಾಗಿದೆ. ಈ ಭಿತ್ತಿಶಿಲ್ಪದಲ್ಲಿ ಜೀವನ ರಂಗ ಎಂಬುದರ ವಿಷಯದ ಮೇಲೆ ಚಿತ್ರಿತವಾಗಿರುವ ಈ ಭಿತ್ತಿಚಿತ್ರದಲ್ಲಿ ಅನೇಕ ಸಣ್ಣ ಪುಟ್ಟ ಮನುಷ್ಯನ ಚಿತ್ರಗಳನ್ನು ಕಾಣುತ್ತೇವೆ. ಇದು ಮನುಷ್ಯನ ಆಕಾರವನ್ನು ಹೊಂದಿದ್ದು, ಮೇಲೆ ಭಾಗದಲ್ಲಿ ಬಲಭಾಗದಲ್ಲಿ ನಾಲ್ಕು ಮಾನವಾಕೃತಿಗಳನ್ನು ಕಾಣುತ್ತೇವೆ. ಎಡಭಾಗದಲ್ಲಿ ಒಬ್ಬ ಮಾನವನು ಮೇಲಿನ



ಸೂರ್ಯಕಾಂತಿಯ ಹೂವು



ಜೀವನ ರಂಗ

ಭಾಗವನ್ನು ಆಧಾರವಾಗಿಟ್ಟುಕೊಂಡು ಉಯ್ಯಾಲೆಯಾಡುತ್ತಿರುವುದನ್ನು ಕಾಣುತ್ತೇವೆ. ಕೆಳಭಾಗದಲ್ಲಿ ಹಾವಿನ ಆಕಾರದಂತೆ ಹೋಲುತ್ತದೆ. ಇಲ್ಲಿ ಕಂದು ಮತ್ತು ಬಂಗಾರದ ವರ್ಣದಿಂದ ಲೇಪಿಸಲಾಗಿದೆ. ಈ ಶಿಲ್ಪಾಕೃತಿಯ ಸಂಯೋಜನೆಯನ್ನು ಉತ್ತಮವಾಗಿ ರಚಿಸಿದ್ದಾರೆ.

**ಸೂರ್ಯ**

ಲೋಹ ಮಾಧ್ಯಮದ ಶಿಲ್ಪವನ್ನು ಮೈಸೂರಿನ ಕಾವಾ ಕಾಲೇಜಿನ ಶಿಲ್ಪಕಲಾ ವಿಭಾಗದಲ್ಲಿನ ಭಿತ್ತಿಯಲ್ಲಿ ಕಾಣಬಹುದು. ಇದು ೬x೮ ಅಡಿ ಅಳತೆಯನ್ನು ಹೊಂದಿದ್ದು, ಲೋಹದ ಮಾಧ್ಯಮದಲ್ಲಿರಚಿಸಿದ್ದಾರೆ.

ಈ ಲೋಹದ ಮಾಧ್ಯಮ ಶಿಲ್ಪಾಕೃತಿಯಲ್ಲಿ ಎಲೆಗಳನ್ನು ರಚಿಸಿದ್ದು, ಸೂರ್ಯನಂತ ಹೋಲಿಕೆಯಂತೆ ಕಾಣುತ್ತದೆ. ಇನ್ನೊಂದು ಕಡೆಯಿಂದ ನೋಡಿದರೆ ಸೂರ್ಯಕಾಂತಿ ಹೂವಿನಂತೆ ಆಕೃತಿ ಕಾಣುತ್ತಿದ್ದು, ಎಲೆಗಳನ್ನು ಸಹ ರಚಿಸಿದ್ದಾರೆ. ಇಲ್ಲಿ ತಂತಿ ಆಕಾರವನ್ನು ಹೋಲುವಂತಹ ದೊಡ್ಡ ಮತ್ತು ಚಿಕ್ಕ ಗಾತ್ರವನ್ನು ಹೊಂದಿರುವಂತಹದನ್ನು ಇಲ್ಲಿ ಕಾಣಬಹುದಾಗಿದೆ. ಒಟ್ಟಾರೆಯಾಗಿ ನೋಡಿದರೆ ಇದು ಒಂದು ಪರಿಸರಕ್ಕೆ ಸಂಬಂಧಿಸಿದಂತಾಗಿ ರಚಿಸಲಾಗಿದೆ. ಭಿತ್ತಿಶಿಲ್ಪದ ಹಿಂದಿನ ಭಾಗಕ್ಕೆ ಹಸಿರು ಬಣ್ಣದಿಂದ ಲೇಪನವನ್ನು ಮಾಡಿದ್ದಾರೆ.

**ಲೋಹ ಮಾಧ್ಯಮದ ರಚನಾ ವಿಧಾನ**

ಮೊದಲು ಕರಡು ಚಿತ್ರವನ್ನು ತಯಾರಿಸಿಕೊಂಡು ಮಾರ್ಕೆಟ್ ಮಾಡಿಕೊಂಡು ಉಬ್ಬು ತಗ್ಗು ಆಕಾರಗಳನ್ನು ಮಣ್ಣಿನಿಂದ ಮಾಡಿಕೊಳ್ಳಬೇಕು. ವಾಕ್ಸನ್ನು ೬mm ನಿಂದ ತಯಾರಿಸದ ಶೀಟ್‌ಗಳನ್ನು ಪೀಸ್ ಮಾಡಿಕೊಂಡು ಅಚ್ಚಿಗೆ ಹಚ್ಚುತ್ತೇವೆ. ಗಂಡು, ಹೆಣ್ಣು ಆಕಾರಗಳನ್ನು ರಚಿಸಿಕೊಂಡು ಪ್ಲಾಸ್ಟರ್ ಆಫ್ ಪ್ಯಾರೀಸ್ ಮತ್ತು ಇಟ್ಟಿಗೆ ಪುಡಿ ಕ್ಲೋರ್ ೫೫% ಮಿಕ್ಸ್ ಮಾಡಿಕೊಳ್ಳಬೇಕು. ನಂತರ ರೆಡಿಯಾದ ಎರಡು ಪೀಸುಗಳನ್ನು ಸೇರಿಸಿ ಕೋರ್ ಹಾಕಲಾಗುತ್ತದೆ. ವಾಕ್ಸ್ ತಿಕನೆಸ್ಸನ್ನು ತುತ್ತನ್ನು ತೆಗೆದು ತುಂಬಬೇಕು, ಎರಡನ್ನು ಜೋಡಿಸಿ ಕ್ಲೋರ್‌ಪೀಲ್ ಮಾಡಬೇಕು. ೩೦ ಇಲ್ಲವೇ ೪೫ ನಿಮಿಷಗಳ ನಂತರ ಮೋಲ್ಡ್ ಹೊಡೆದು ವಾಕ್ಸ್‌ಗಳ ತುಂಡುಗಳನ್ನು ಮಾಡಿ ಪೀಗರ್ ಕ್ಲೀನ್ ಮಾಡಿಕೊಂಡು ೧ ಅಥವಾ ೧½ ಇಂಚಿನಷ್ಟು ವ್ಯಾಕ್ಸ್‌ನಿಂದ ಮಾಡಿದ್ದು ಬಾಟಮ್‌ನಿಂದ ಟೇಕ್ ಮಾಡಿಕೊಂಡು ಪ್ಲಾಸ್ಟರ್ ಆಫ್ ಪ್ಯಾರೀಸ್ ಮತ್ತು ಇಟ್ಟಿಗೆ ಪುಡಿಯನ್ನು ಮತ್ತೆ ಪಿಲ್ ಮಾಡಿ ಕ್ಲೋರನ್ನು ಬಿಸಿಮಾಡಿದಾಗ ಮೈನ್ ಎಲ್ಲಾ ಕರಗುತ್ತದೆ. ಕಬ್ಬಿಣ ರಾಡುಗಳನ್ನು ಸರಳವಾಗಿ ಹೋಗುವ ಜಾಗಕ್ಕೆ ಹೊಡೆಯುತ್ತಾ ರೈಜರ್ ರೆನರ್ ಗಾಳಿ ಹೋಗುವುದಕ್ಕೆ ತೂತನ್ನು ಮಾಡಿಕೊಡು ಅದಕ್ಕೆ ಬೆಂಕಿ ಇಟ್ಟು ೬೦೦ ಸೆಂಟೆಗ್ರೇಡ್ ಬಿಸಿಕೊಟ್ಟರು,ಅದನ್ನು ಉಲ್ಟಾ ಮಾಡಿ ಒಳಗಿನ ಭಾಗ ಸುಟ್ಟಾಗ ಕರಗಿ ಕೆಳಗೆ ಬರಬೇಕು. ಇನ್ನೊಂದು ಕಡೆಗೆ ೭೦೦ ಸೆಂಟಿಗ್ರೇಡ್ ಸುಟ್ಟರೆ ಕಬ್ಬಿಣ ಕರಗುತ್ತದೆ. ಕ್ಲೋರ್ ಕ್ರೂಸೆಬರ್‌ನಿಂದ ಮೆಟಲನ್ನು ಕರಗಿಸುತ್ತಾರೆ. ಗ್ರಾಫೈಟ್‌ನಿಂದ ಮಾಡುತ್ತಾರೆ. ೧೨೦೦ ಸೆಂಟ್ರಿಗ್ರೇಡ್ ಮರದ ಇದ್ದಿಲು, ಕೆರೋಶಿನ್ ಹಾಕಿ ಬೆಂಕಿ ಹಚ್ಚುತ್ತಾರೆ. ಕಚ್ಚಾವಸ್ತುಗಳು 'ಯು' ಆಕಾರಗಳನ್ನು ಮೆಟಲ್ ನಿರಂತರ ಹೋಗಿ ಖಾಲಿ ಜಾಗಕ್ಕೆ ತುಂಬಿಕೊಳ್ಳುತ್ತದೆ. ೨ ತಾಸುಗಳ ನಂತರ

ಆಕ್ಸಿಲೇಟರ್ ನೈಟ್ರಿಕ್ ಆಕ್ಸೈಡ್, ಸೆಲ್ಯೂಪ್ಯೂರಿಕ್ ಆಕ್ಸೈಡ್‌ನಿಂದ ತೊಳೆದು ಅದು ಕಪ್ಪಾಗುತ್ತದೆ. ೧ ಗಂಟೆ ಬಿಟ್ಟನಂತರ ನೀರು ಮತ್ತು ಹುಣಿಸೆ ಹಣ್ಣು ಹಾಕಿ ತೊಳೆಯಬೇಕು. ಇದರಲ್ಲಿ ಹಸಿರು, ಕಪ್ಪು, ಕಂದು ಬಣ್ಣಗಳನ್ನು ಕಾಣುತ್ತೇವೆ. ಪರಿಕರಗಳು, ರೆಜನ್ಸ್, ವಾಕ್ಸ್, ಇಟ್ಟಿಗೆಪುಡಿ, ಕೆರೋಶಿನ್ ಇತ್ಯಾದಿ.

**ಪ್ಲಾಸ್ಟರ್ ಆಫ್ ಪ್ಯಾರೀಸ್**

ಪ್ಲಾಸ್ಟರ್ ಆಫ್ ಪ್ಯಾರೀಸ್ ಸಹಜವಾಗಿ ಎಲ್ಲಾ ರೀತಿಯಲ್ಲಿಯೂ ಉಪಯುಕ್ತಕರವಾದ ಮಾಧ್ಯಮವಾಗಿದೆ. ಇದು ಪೌಡರ್ ರೂಪದ ವಸ್ತು ಆಗಿದ್ದು. ಆಧುನಿಕ ಕಾಲದಲ್ಲಿ ಯುವ ಕಲಾವಿದರು ಇದನ್ನು ಬಳಸುತ್ತಿರುವುದನ್ನು ಕಾಣುತ್ತೇವೆ. ಇದು ಕೆಲವು ವರ್ಷಗಳಿಂದ ನಡೆದುಕೊಂಡು ಬಂದಿದ್ದರೂ ಇಂದಿನ ಕಲಾವಿದರು ಕಲಾಕೃತಿಗಳ ರಚನೆಯ ಜೊತೆಗೆ ವ್ಯವಹಾರಿಕ ದೃಷ್ಟಿಯಿಂದ ಈ ಮಾಧ್ಯಮವನ್ನು ಬಳಸುತ್ತಿದ್ದಾರೆ. ಮನೆ, ಕಲ್ಯಾಣಮಂಟಪ, ಮಠ, ಶ್ರೀಮಂತರ ಮನೆಗಳಲ್ಲಿ ಈ ಮಾಧ್ಯಮದಲ್ಲಿ ಹೆಚ್ಚು ಕಲಾಕೃತಿಗಳನ್ನು ರಚನೆ ಮಾಡುತ್ತಾರೆ.ಸೌಂದರ್ಯದ ದೃಷ್ಟಿಯ ಹಿನ್ನಲೆಯಲ್ಲಿ ಈಗಿನ ಜನಸಾಮಾನ್ಯರು ರಚಿಸತೊಡಗಿಸಿಕೊಂಡರು.

ಪ್ಲಾಸ್ಟರ್ ಆಫ್ ಪ್ಯಾರೀಸ್ ಒಂದು ಘನಾಕೃತಿಯ ಮಾಧ್ಯಮವಾಗಿದ್ದು, ಇದರ ಎರಡು ರೀತಿಯಲ್ಲಿ ಪೌಡರ್ ಇರುತ್ತದೆ. ಒಂದು ಬೇಗನೇ ಗಟ್ಟಿಯಾಗುವುದು ಇನ್ನೊಂದು ನಿಧಾನಗತಿಯಾಗಿ ಘನಕೃತಿಗೆ ತಿರುಗುವುದು. ದ್ರವರೂಪ ಇರುವಾಗಲೇ ಮೊಲ್ಡ್‌ನ ಮೇಲೆ ಸುರಿಯಬೇಕು. ಅದು ಗಟ್ಟಿಯಾದ ಮೇಲೆ ಉಬ್ಬು ಶಿಲ್ಪಗಳನ್ನು ಕೊರೆಯಬಹುದು. ಪಿಯೋಪಿಯನ್ನು ಸಹಜವಾಗಿ ಮಣ್ಣಿನಿಂದ ಮಾಡಿದಂತಹ ಚಿತ್ರಗಳಿಗೆ ಎಣ್ಣೆ ಅಥವಾ ಮೇಣದಲ್ಲಿ ಮಾಡಿ ಅದರ ಮೇಲೆ ಪ್ಲಾಸ್ಟರ್ ಆಫ್ ಪ್ಯಾರಿಸನ್ನು ನೀರಿನೊಂದಿಗೆ ಮಿಶ್ರಣ ಮಾಡಿ ಸೂರಿಯಬೇಕು. ಒಂದು ಲೇಯರ್ ಆದ ಮೇಲೆ ಅದರ ಮೇಲಿನ ಭಾಗಕ್ಕೆ ನಾರಿನಂತೆ ರೂಪದ ವಸ್ತುವನ್ನು ಮಿಶ್ರಗೊಳಿಸಿ ಪ್ಲಾಸ್ಟರ್ ಆಫ್ ಪ್ಯಾರೀಸನ್ನು ಸುರಿಯಬಹುದು. ಈ ರೀತಿಯ ಮಾಡುವುದರಿಂದ ನಮಗೆ ಗಟ್ಟಿಯಾದ ಹೊಡೆಯದಂತೆ ಎಣ್ಣೆ ಲೇಪನದಿಂದ ಸುಲಭವಾಗಿ ಮೋಡ್ ಬರುತ್ತದೆ. ಅನುಭವ ಕಲಾವಿದರು ತಮ್ಮ ಸೃಜನಾತ್ಮಕ ಕಲಾಕೃತಿಗಳನ್ನು ಈ ಮಾಧ್ಯಮದಲ್ಲಿ ರಚಿಸಿ ನಂತರ ಅದಕ್ಕೆ ಬೇಕಾದ ವರ್ಣವಿನ್ಯಾಸ ಅಥವಾ ಹಾಗೆ ಬಿಳಿ ವರ್ಣ ಲೇಪನ ಮಾಡಿ ಬಿಡುವರು.

ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ಶಿಲ್ಪಗಳ ಮೋಡಗಳ ಸಹಾಯದಿಂದ ತೆಗೆಯಬಹುದು ಇದರಲ್ಲಿ ಸಹ ನಾನಾ ರೀತಿಯ ಉತ್ತಮಗುಣವುಳ್ಳ ಪೌಡರ್ ಸಿಗುತ್ತವೆ. ಉತ್ತಮವಾದ ಚಿತ್ರಗಳು ಮತ್ತು ಪೀನಿಷಿಂಗ್ ಬರುವುದಕ್ಕೆ ಸಹಾಯಕವಾಗುತ್ತದೆ. ಆಧುನಿಕ  ಯುಗದಲ್ಲಿ ಮಣ್ಣಿಗಿಂತ ಪ್ಲಾಸ್ಟರ್ ಆಫ್ ಪ್ಯಾರೀಸ್‌ನ ಪಾತ್ರವು ಬಹು ಹೆಚ್ಚಿನದ್ದಾಗಿದೆ. ಇಂದು ಮಾರುಕಟ್ಟೆಯಲ್ಲಿ ಸಹಜವಾಗಿಸುವಂತಹವಾಗಿದೆ. ಇದು ಕಲಾ ಸೌಂದರ್ಯಕ್ಕೆ ಸಹಕಾರಿಯಾಗಿದೆ. ಅದಕ್ಕೆ ಇದು ಹೆಚ್ಚಾಗಿ Intermir ನಲ್ಲಿ ಮಾತ್ರ ಬಳಸಬೇಕಾಗುತ್ತದೆ. ಹೆಚ್ಚು ಮಳೆಬರುವ ಹಾಗೂ ಹೆಚ್ಚು ತೇವಾಂಶವಿರುವ ಸ್ಥಳಗಳಲ್ಲಿ ಈ ಕೃತಿಯನ್ನು ಮಾಡಲು ಸಾಧ್ಯವಿಲ್ಲ. ಜೋಡಣೆ ಬಳಸುವ ಪರಿಕರಗಳು ಪಿ.ಓ.ಪಿ.ನಾರು ಮೇಣ, ಎಣ್ಣೆ ಇತ್ಯಾದಿ.

### ಮರ ಮತ್ತು ಪಕ್ಷಿಗಳು

ಈ ಭಿತ್ತಿಶಿಲ್ಪವನ್ನು ಎಸ್.ಎಸ್.ಶಿಂ.ಪಿಯವರು ೨೦೧೨ರಲ್ಲಿ ರಚಿಸಿದ್ದು ಗುಲ್ಬರ್ಗಾದ ಹೊಸಕಟ್ಟಡದಲ್ಲಿ ಕಾಣಬಹುದು. ಇದು ೨೦x೪೦ ಅಡಿ ಅಳತೆಯನ್ನು ಹೊಂದಿದೆ.

ಭಿತ್ತಿಶಿಲ್ಪದಲ್ಲಿ ಒಂದು ದೊಡ್ಡಮರದಲ್ಲಿ ವಿವಿಧ ರೀತಿಯ, ವಿವಿಧ ಬಣ್ಣಗಳಿಂದ ಕೂಡಿದಂತಹ ಚಿಲಿಪಿಲಿಯಾಡುತ್ತಿರುವ ಪಕ್ಷಿಗಳನ್ನು ರಚಿಸಿದ್ದಾರೆ. ಅವು ಹಳದಿ, ನೀಲಿ, ಕೇಸರಿ, ಹಸಿರು, ಕಪ್ಪು ಬಣ್ಣಗಳಿಂದ ಕೂಡಿವೆ. ಮರವನ್ನು ಬೃಹದಾಕಾರವಾಗಿ ರಚಿಸಿ, ರೆಂಬೆ, ಕೊಂಬೆಗಳು ಮತ್ತು ಸುಂದರವಾದ ಎಲೆಗಳನ್ನು ಕಾಣಬಹುದು. ಇವುಗಳೆಲ್ಲವನ್ನು ಸಂಯೋಜನೆ ಮಾಡಿ ಒಂದು ದೊಡ್ಡ ಭಿತ್ತಿಶಿಲ್ಪವನ್ನು ರಚಿಸಿದ್ದಾರೆ. ಇದರಿಂದಾಗಿ ಆ ಕಟ್ಟಡ ಸೌಂದರ್ಯವು ಬಲು ಸುಂದರವಾಗಿ ಕಾಣಿಸುತ್ತದೆ.

### ಪುರುಷ ಭಿತ್ತಿಶಿಲ್ಪ

ಈ ಭಿತ್ತಿಶಿಲ್ಪವನ್ನು ಬೋಸ್ ಬುವಾಜಿಯವರು ರಚಿಸಿದ್ದು, ಗುಲ್ಬಗಾದ ದಿ ಐಡಿಯಲ್ ಫೈನ್ ಆರ್ಟ್‌ನ ಭಿತ್ತಿಯ ಮೇಲೆ ರಚನೆ ಮಾಡಿರುವುದನ್ನು ಕಾಣುತ್ತೇವೆ.

ಭಿತ್ತಿಶಿಲ್ಪದಲ್ಲಿ ಒಬ್ಬ ಮನುಷ್ಯನ ಅರ್ಧ ದೇಹವನ್ನು ರಚಿಸಿದ್ದು. ಅವನು ಯೋಜನೆ ಮಾಡಿಂತಹ ಯಾವುದೇ ಒಂದು ಕೆಲಸವನ್ನು ಯಶಸ್ವಿಯಾಗಿ ಮುಗಿಸಿದ ಸಂದರ್ಭವನ್ನು ಈ ಭಿತ್ತಿಯಲ್ಲಿ ಚಿತ್ರಿಸಲಾಗಿದೆ. ಇಲ್ಲಿ ಮೂಗು, ಕಣ್ಣು, ಬಾಯಿಯನ್ನು ರಚಿಸಿದ್ದು ಕಣ್ಣುಗಳನ್ನು ಅಮೂರ್ತವಾಗಿ ರಚಿಸಿದ್ದು. ತನ್ನ ಎಡಗೈಯನ್ನು ಮುಷ್ಟಿ ಹಿಡಿದುಕೊಂಡು ಮುನ್ನುಗುತ್ತಿರುವುದನ್ನು ಕಾಣಬಹುದು. ಸೊಂಟಕ್ಕೆ ಒಂದು ದೋತ್ರವನ್ನು ಸುತ್ತಿಕೊಂಡಿದ್ದು, ಅವುಗಳ ಮಡಿಚಿಕೊಂಡಿರುವಂತೆ ಕಾಣುತ್ತದೆ. ಒಟ್ಟಾರೆಯಾಗಿ ಈ ಭಿತ್ತಿ ಶಿಲ್ಪವು ಪ್ಲಾಸ್ಟರ್ ಆಫ್ ಪ್ಯಾರೀಸ್‌ನಿಂದ ರಚನೆಗೊಂಡಿದೆ.

### ಹೂವಿನೊಂದಿಗೆ ಮಹಿಳೆ

ಭಿತ್ತಿಶಿಲ್ಪವನ್ನು ವಿ.ಜಿ. ಅಂದಾನಿಯವ ಮನೆಯ ಕೋಣೆಯ ಭಿತ್ತಿಗೆ ರಚಿಸಿದ್ದು, ಇದು ಒಬ್ಬ ಸ್ತ್ರೀಯು ತನ್ನ ಬಲಗೈಯನ್ನು ಎಡಗಾಲ ಮೇಲೆ ಇಟ್ಟು ತಲೆಯನ್ನು ಅದರ ಮೇಲೆ ಇಟ್ಟುಕೊಂಡು ಯೋಚನೆ ಮಾಡುತ್ತಿರುವುದನ್ನು ಕಾಣುತ್ತೇವೆ. ಹಿನ್ನೆಲೆಯಲ್ಲಿ ಸೂರ್ಯಕಾಂತಿಯ ಹೂವುಗಳನ್ನು ರಚಿಸಿದ್ದು, ಎಲೆ, ಬಳ್ಳಿಗಳನ್ನು ಸುಂದರವಾಗಿ ರಚನೆ ಮಾಡಿರುವುದನ್ನು ಕಾಣುತ್ತೇವೆ. ಇದು ವೃತ್ತಾಕಾರವಾಗಿದ್ದು ಪ್ಲಾಸ್ಟರ್ ಆಫ್‌ಪ್ಯಾರೀಸ್‌ನಿಂದ ರಚನೆ ಮಾಡಿದ್ದಾರೆ.

### ಸಂಗೀತ ಮತ್ತು ಮೋಜು

ಭಿತ್ತಿಶಿಲ್ಪವನ್ನು ಎಸ್.ಎಸ್.ಶಿಂಪಿಯವರು ರಚಿಸಿದ್ದು, ಇದು ಗುಲ್ಬರ್ಗಾದ ಹೊಸ ಕಟ್ಟಡದ ಮೇಲೆ ರಚನೆಯಾಗಿದ್ದು. ೮x೧೫ ಅಡಿ ಅಳತೆಯನ್ನು ಹೊಂದಿದ್ದು. ೨೦೧೨ರಲ್ಲಿ ರಚಿಸಿದ್ದಾರೆ.

ಈ ಭಿತ್ತಿಶಿಲ್ಪದಲ್ಲಿ ಗೀಟಾರ್ ಬಾರಿಸುತ್ತಿರುವ ಕೊಳಲನ್ನು ಆಡಿಸುತ್ತಿರುವ ಮತ್ತು ಒಬ್ಬ ಮಹಿಳೆಯು ತಂಬೂರಿಯನ್ನು ನುಡಿಸುತ್ತಿರುವುದನ್ನು ಕಾಣುತ್ತೇವೆ. ಅದರ ಹಿಂದಿನ ಭಾಗದಲ್ಲಿ ಇಬ್ಬರು ಸೇವಕರು ಹೋಗುತ್ತಿದ್ದು, ಅದರ ಮೇಲ್ಭಾಗದಲ್ಲಿ ಟೇಬಲ್, ಚೇರ್‌ಗಳ ಮೇಲೆ ಮೂರು ಜನ ಕುಳಿತಿದ್ದು, ಅದರ ಹಿಂದಿನ ಭಾಗದಲ್ಲಿ ಒಬ್ಬ ಸ್ತ್ರೀ, ಮತ್ತೊಬ್ಬ ಪುರುಷ ಡೀನರ್ ಮಾಡುತ್ತಿರುವುದನ್ನು ಕಾಣುತ್ತೇವೆ. ಅದರ ಮೇಲಿನ ಚಿತ್ರದಲ್ಲಿ ಇಬ್ಬರು ಜೋಡಿಗಳು ಒಬ್ಬರಿಗೊಬ್ಬರು ಅಪ್ಪಿಕೊಂಡು ರೋಮ್ಯಾನ್ಸ್ ಮಾಡುತ್ತಿರುವಂತಹ ದೃಶ್ಯವನ್ನು ಕಾಣಬಹುದು. ಅದರ ಪಕ್ಕದಲ್ಲಿ ವಿದ್ಯುತ್ ದೀಪದ ಕಂಬಗಳನ್ನು ರಚಿಸಿದ್ದು. ದುಂಡನೆಯ ಮೂರು ಆಕೃತಿಗಳನ್ನು ಕಾಣಬಹುದು.

ಕಾವಿ ಕಲೆ

ಕರ್ನಾಟಕ ಪಾರಂಪರಿಕೆ ಹಾಗೂ ಜನಪದ ಚಿತ್ರಕಲೆಗೆ ಸಾವಿರಾರು ವರ್ಷಗಳ ಭವ್ಯ ಇತಿಹಾಸವಿದೆ. ಯಾವುದೇ ಪ್ರದೇಶದ ಶಿಷ್ಠಕಲಾ ಪ್ರಚಾರಕ್ಕಾಗಲಿ ಪಾರಂಪರಿಕ ಕಲಾ ಸಾಂಪ್ರದಾಯಕ್ಕಾಗಲೀ ಜನಪದ ಕಲೆಯು ತಳಪಾಯವಾಗಿರುತ್ತದೆ ಎಂಬುದು ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಜನಪದ ಚಿತ್ರಕಲೆಯೂ ಧರ್ಮ ಮೂಲವಾಗಿ ಬೆಳೆದು ಬಂದಿದೆ. ಚಿತ್ರ ಕಲೆಯೆಂದೊಡನೆ ಬಣ್ಣದ ಕುಂಚದ ಪ್ರಪಂಚವೆಂಬಂತಹ ಅನಿಸಿಕೆ ಸಹಜ ಅಥವಾ ಬಣ್ಣದೊಡನೆ ಆಟವಾಡುವ ಈ ಕಲೆಯ ಮಹತ್ವವೇನಿದ್ದೀತು ಎಂದೂ ಕಡೆಗಣಿಸಿದರೂ ವರ್ಷದ ಅನೇಕ ದಿನಗಳನ್ನು ನಾವು ಬಣ್ಣ ಜೀವಿಗಳಾಗಿಯೇ ಕಳೆಯುತ್ತೇವೆ. ಬದುಕು ಮಾಂತ್ರಿಕ ಚಟುವಟಿಕೆಯಾಗುವುದರಿಂದ ಅದರ ಮಹತ್ವ ಕಂಡು ಬರುವುದಿಲ್ಲ.[೧]

ಹಳ್ಳಿಯ ಪರಿಸರ

ಕಾವಿ ಚಿತ್ರವನ್ನು ಚಿಕ್ಕಮಂಗಳೂರಿನ ಶಾಂತಿನಿಕೇತನ ಚಿತ್ರಕಲಾ ಮಹಾವಿದ್ಯಾಲಯದ ಭಿತ್ತಿಯ ಮೇಲೆ ರಚಿಸಿದ್ದು, ೮x೪ ಅಡಿ ಅಳತೆಯನ್ನು ಹೊಂದಿದ್ದು ಕಾಲೇಜಿನ ವಿದ್ಯಾರ್ಥಿಗಳನ್ನು ಮತ್ತು ಹರ್ಷಾ ಎಂಬುವವರು ರಚಿಸಿದ್ದಾರೆ.

ಈ ಚಿತ್ರದಲ್ಲಿ ಒಂದು ಹಳ್ಳಿಯ ಪರಿಸರವನ್ನು ಕಾಣಬಹುದು. ಇದನ್ನು ಜನಪದ ಶೈಲಿಯಲ್ಲಿ ರಚಿಸಿದ್ದು, ಒಂದು ಹಳ್ಳಿಯಲ್ಲಿ ದಿನನಿತ್ಯ ಆಗುವಂತಹ ಘಟನೆಗಳನ್ನು ಇಲ್ಲಿ ಬಿಂಬಿಸಲಾಗಿದೆ. ಹಳ್ಳದಲ್ಲಿ ನೀರಿದ್ದು, ಈ ನೀರಿನ ಮೇಲೆ ಎರಡು ದೋಣಿಗಳನ್ನು ಕಾಣಬಹುದು. ಒಂದರಲ್ಲಿ ದೋಣಿಯನ್ನು ನಡೆಸುತ್ತಿರುವ ಇನ್ನೊಂದು ದೋಣಿಯಲ್ಲಿ ಇಬ್ಬರು ವ್ಯಕ್ತಿಗಳನ್ನು ಕಾಣುತ್ತೇವೆ. ಎಡಭಾಗದಲ್ಲಿ ಗದ್ದೆಯಲ್ಲಿ ಬೆಳೆದಂತ ಪೈರನ್ನು ಕಾಣಬಹುದು. ಮೂರು ತೆಂಗಿನ ಮರಗಳು ಅದರಲ್ಲಿ ಒಂದಕ್ಕೆ ಹತ್ತುತ್ತಿರುವಂತೆ ಮನುಷ್ಯನನ್ನು ಕಾಣಬಹುದು. ಹಿಂದೆ ಹಂದಿ ಅದರ ಹಿಂಭಾಗದಲ್ಲಿ ನೃತ್ಯಮಾಡುತ್ತಿರುವುದು ಮತ್ತು ಕೀಲು ಕುದುರೆ ಅದರ ಪಕ್ಕದಲ್ಲಿ ಬೆಳೆದು ನಿಂತಿರುವಂತಹ ಗಿಡಗಳ ಬಂಡಿಯನ್ನು ಓಡಿಸುತ್ತಿರುವ ವ್ಯಕ್ತಿ ಅದರ ಹಿಂದೆ ಕುಳಿತಿರುವಂತಹ ಇಬ್ಬರು ಹೆಣ್ಣು ಮಕ್ಕಳು ಎರಡು ಎತ್ತುಗಳು ರಥ, ರಥವನ್ನು ಜಗ್ಗುತ್ತಿರುವ ಜನರು ಕಲ್ಯಾಣ ಮಂಟಪ, ಆನೆ, ಜಿಂಕೆ, ನವಿಲು ನೂತನವಾಗಿ ಕಟ್ಟಲಾದಂತಹ ಮನೆಗಳು ಸಾಲುಸಾಲಾಗಿ ನಿಂತು ಬೆಟ್ಟದಂತೆ ಬೆಳೆದಿರುವ ಮಂದಿ ಹಾರುತ್ತಿರುವ ಪಕ್ಷಿಗಳನ್ನು ಕಾಣಬಹುದು. ಬಿಳಿಯ ಬಣ್ಣದಿಂದ ಹೊರರೇಖೆಗಳನ್ನು ಕಾವಿಯ ಬಣ್ಣದ ಮೇಲೆ ರಚನೆ ಮಾಡಿದ್ದಾರೆ.

---

೧. ಡಾ.ಎಸ್.ಸಿ.ಪಾಟೀಲ, ಸತ್ಯಾನಂದ ಪಾತ್ರೋಟ:ನಿಜದ ನೆಲೆ, ಕಾವಿಚಿತ್ರಕಲೆ ಲೇಖನ : ಆನಂದ ಕೆ.ಪೂಜಾರ, ಪುಟ-೯೭



ಹಳ್ಳಿಯ ಪರಿಸರ



ಜಾನಪದ ಶೈಲಿಯ ದೇವರು

### ಜನಪದ ಶೈಲಿಯ ದೇವರು

ಈ ಕಾವಿ ಚಿತ್ರವನ್ನು ಚಿಕ್ಕಮಂಗಳೂರಿನ ಶಾಂತಿ ನಿಕೇತನ ಚಿತ್ರಕಲಾ ಮಹಾವಿದ್ಯಾಲಯದ ಭಿತ್ತಿಯ ಮೇಲೆ ರಚಿಸಿದ್ದು, ೩x೪ ಅಡಿ ಅಳತೆಯನ್ನು ಹೊಂದಿದೆ. ೧೯೯೬ರಲ್ಲಿ ರಚಿಸಿದ್ದು, ಕಾಲೇಜಿನ ವಿದ್ಯಾರ್ಥಿಗಳು ರಚಿಸಿದ್ದಾರೆ.

ಈ ಚಿತ್ರವನ್ನು ಜನಪದ ಶೈಲಿಯಲ್ಲಿ, ಬಿಳಿಯ ಬಣ್ಣದಿಂದ ಹೊರ ರೇಖೆಗಳನ್ನು ರಚಿಸಿದ್ದು, ಬಬ್ಬ ನಿಂತಿರುವಂತ ವ್ಯಕ್ತಿಯನ್ನು ಕಾಣಬಹುದು. ಈ ಚಿತ್ರದ ಮುಖದಲ್ಲಿ ಕಣ್ಣು, ಮೂಗು, ಮೀಸೆಯನ್ನು ದೊಡ್ಡದಾಗಿ ರಚಿಸಿದ್ದು ಎರಡು ಕೊಂಬುಗಳನ್ನು ರಚಿಸಿದ್ದಾರೆ.

ಎದೆಯ ಭಾಗವನ್ನು 'ಯು' ಆಕಾರವಾಗಿ ರಚಿಸಿದ್ದು, ಹೊಟ್ಟೆಯ ಭಾಗದ ಮೇಲೆ ಎರಡು ಹಾವುಗಳು ಸುರುಳಿ ಸುತ್ತಿಕೊಂಡಿರುವುದನ್ನು ಕಾಣುತ್ತೇವೆ ಇದರ ಕೆಳಭಾಗದಲ್ಲಿ ಕಾಲುಗಳನ್ನು ರಚಿಸಿದ್ದು. ಅದರ ಕೆಳಭಾಗದಲ್ಲಿ ಸೂರ್ಯ, ಚಂದ್ರರನ್ನು ರಚಿಸಿದ್ದು. ಚಿತ್ರದ ಕೊನೆಯ ಭಾಗದಲ್ಲಿ ಹಾವಿನ ವಿನ್ಯಾಸ ರಚಿಸಿ ಬಾಯಿ, ಕಣ್ಣು, ಮೂಗು ಇವುಗಳನ್ನು ರಚಿಸಿದ್ದು, ಅದಕ್ಕೆ ಆದಾರವಾಗಿ ಮೂರು ಕಾಲುಗಳನ್ನು ರಚಿಸಿದ್ದಾರೆ. ಕಲಾಕೃತಿಯ ಎಡ ಮತ್ತು ಬಲಭಾಗದಲ್ಲಿ ವಿವಿಧ ರೀತಿಯ ವಿನ್ಯಾಸಗಳನ್ನು ಕಾಣಬಹುದು.

### ಜನಪದ ಉತ್ಸವ

ಭಿತ್ತಿ ಚಿತ್ರವನ್ನು ಗುಲ್ಬರ್ಗಾ ಐಡಿಯಲ್ ಪೈನ್ಸ್ ಆರ್ಟ್‌ನ ಆವರಣದಲ್ಲಿದ್ದು, ೩x೮ ಅಡಿ ಅಳತೆಯನ್ನು ಹೊಂದಿದ್ದು ಶಿಲ್ಪಾ ಪಾಟೀಲ್ ಎಂಬುವವರು ರಚಿಸಿದ್ದಾರೆ.

ಈ ಭಿತ್ತಿಚಿತ್ರದಲ್ಲಿ ಉತ್ಸವದ ಆಡಂಬರಗಳು ಕಾಣಿಸುತ್ತಿದ್ದು. ಜನಪದ ಶೈಲಿಯಲ್ಲಿ ರಚಿತಗೊಂಡಿವೆ. ಸಾಲು ಸಾಲಾಗಿ ನಿಂತಿರುವ ಜನರು ಮತ್ತು ಹೊಲಗದ್ದೆಗಳಲ್ಲಿ ಕೆಲಸ ಮಾಡುತ್ತಿರುವಂತಹ ಜನರುಗಳನ್ನು ಇಲ್ಲಿ ಕಾಣಬಹುದಾಗಿದೆ. ಸಾಲು ಸಾಲಾಗಿ ನಿಂತಿರುವಂತಹ ಬಂಡಿಯ ಸಾಲುಗಳನ್ನು ಕಾಣಬಹುದು. ಅಲ್ಲಲ್ಲಿ ಚಿಕ್ಕ ಪುಟ್ಟ ಮನೆಗಳನ್ನು ಕಾಣಬಹುದು. ಪಕ್ಷಿಗಳು ಹಾರಾಡುತ್ತಿರುವುದನ್ನು ಕಾಣಬಹುದು. ಒಟ್ಟಾರೆಯಾಗಿ ಹಳ್ಳಿಯಲ್ಲಿ ನಡೆಯುವ ಸಡಗರ ಸಂಭ್ರಮವನ್ನು ಇಲ್ಲಿ ರಚಿಸಲಾಗಿದೆ.

### ಜನಪದ ನೃತ್ಯ

ಈ ಭಿತ್ತಿಚಿತ್ರವು ಬೆಂಗಳೂರಿನ ಕಲಾಮಂದಿರ ಹೊರಭಿತ್ತಿಯಲ್ಲಿ ಕಾಣಬಹುದು. ಇದನ್ನು ಕಲಾ ಕಾಲೇಜಿನ ವಿದ್ಯಾರ್ಥಿಗಳು ರಚಿಸಿದ್ದು, ಇದು ೬x೨೦ ಅಡಿ ಅಳತೆಯನ್ನು ಹೊಂದಿದ್ದಾಗಿದೆ.

ಈ ಭಿತ್ತಿಚಿತ್ರವು ಜನಪದ ಶೈಲಿಯಲ್ಲಿ ರಚಿಸಿದ್ದು. ಜನಪದ ಆಚರಣೆಗಳು ಒನಕೆ ಕುಟ್ಟುವ ಬೆಳೆದ ದವಸಧಾನ್ಯಗಳನ್ನು ಗಾಳಿಯಲ್ಲಿ ತೂರುತ್ತಾ ಜೊಳ್ಳು ಪದಾರ್ಥಗಳನ್ನು ಬೇರೆ ಮಾಡುವ ವಿಧಾನ, ಒಂದು ಮನೆ, ಮನೆಯ ಮುಂದೆ ತುಳಸಿ ಕಟ್ಟೆ ಅದರ ಪಕ್ಕದಲ್ಲಿ ಕೋಳಿಯು ನಿಧಾನಗತಿಯಲ್ಲಿ ಹೆಜ್ಜೆಗಳನ್ನು ಹಿಡುವಂತೆ ರಚಿಸಿದ್ದು, ಮತ್ತೊಂದು ಭಾಗದಲ್ಲಿ ಆನೆಯ ಮೇಲೆ ಕುಳಿತು ಹೊರಟಿರುವುದನ್ನು ಕಾಣುತ್ತೇವೆ. ಡೊಳ್ಳು ಭಾರಿಸುತ್ತಿರುವ, ಪೀಪಿ ಊದುತ್ತಿರುವ, ತಾಳ ಹೊಡೆಯುತ್ತಿರುವ, ಡೊಳ್ಳು ಹೊಡೆದುಕೊಂಡು ನಾಟ್ಯವನ್ನು ಮಾಡುತ್ತಿರುವ ಅದರ ಹಿಂದೆ ಗಿಡಗಳನ್ನು ರಚಿಸಿದ್ದು ಎಡಗಡೆ ಒಂದು ಮನೆಯಲ್ಲಿ ಜೋಕಾಲಿ ಹಾಡುತ್ತಿದ್ದು, ಕಾವಲುಗಾರರು ಇನ್ನೊಂದೆಡೆಯಲ್ಲಿ ನೃತ್ಯ ಮಾಡುತ್ತಿರುವ ಮತ್ತು ಹೊಲದಲ್ಲಿ



ಜನಪದ ಉತ್ಸವ



ಜನಪದ ನೃತ್ಯ



ಜನಪದ ಹಸಿಮಣೆ

ದುಡಿಯುತ್ತಿರುವುದನ್ನು ಕಾಣುತ್ತೇವೆ. ಕೆಳಭಾಗದಲ್ಲಿ ಬುಟ್ಟಿ ತೆಗೆದುಕೊಂಡು ಹೋಗುತ್ತಿರುವ. ನೃತ್ಯ ಮಾಡುತ್ತಿರುವ ವಿವಿಧ ಆಯಾಮಗಳನ್ನು ರಚಿಸಿರುವುದನ್ನು ಕಾಣುತ್ತೇವೆ.

**ಹಸಿ ಮಣೆ**

ಈ ಭಿತ್ತಿಚಿತ್ರವು ಬೆಂಗಳೂರಿನ ಕಲಾ ಗ್ರಾಮದಲ್ಲಿ ಕೆ.ಮಂಜು ಎಂಬುವವರು ೨೦೦೬ರಲ್ಲಿ ರಚಿಸಿದ್ದು, ೮x೧೦ ಅಡಿ ಅಳತೆಯನ್ನು ಹೊಂದಿದ್ದು.

ಭಿತ್ತಿಚಿತ್ರವು ಜನಪದ ಶೈಲಿಯಲ್ಲಿದ್ದು ಹಸೆಮಣೆಯ ಮೇಲೆ ಹೆಣ್ಣು, ಗಂಡು ನಿಂತಿರುವುದನ್ನು ಕಾಣುತ್ತೇವೆ. ಇಲ್ಲಿ ಚೌಕಾಕಾರವಾಗಿ ವಿವಿಧ ವಿನ್ಯಾಸಗಳನ್ನು ರಚಿಸಿರುವುದನ್ನು ನೋಡುತ್ತೇವೆ. ಇಲ್ಲಿ ನಾಲ್ಕು ಮಂದಿ ನಿಂತಿದ್ದು ಪೀಪಿ ಊದುತ್ತಿರುವ ತಮಟೆಯನ್ನು ಭಾರಿಸುತ್ತಿರುವ ಕೋಲಾಟವಾಡುತ್ತಿರುವುದನ್ನು ಕಾಣಬಹುದು. ಕೆಳಭಾಗದಲ್ಲಿ ಸಾಲು ಸಾಲಾಗಿ ನಿಂತಿರುವುದು ಸುಂದರವಾಗಿ ಕಾಣೆಸುತ್ತದೆ. ಇದರಲ್ಲಿ ವಿವಿಧ ರೂಪದ ಹೂವಿನ ಆಕಾರಗಳನ್ನು ರಚಿಸಿದ್ದು, ಮೇಲಿನ ಭಾಗದಲಿ ಪಕ್ಷಿಗಳನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಸೌಂಧರ್ಯಕ್ಕೆ ಹೆಚ್ಚಿನ ಆಧ್ಯತೆ ನೀಡಿದ್ದಾರೆ.

**ಟೈಲ್ಸ್ ಮಾಧ್ಯಮ (ಮೊಜಾಯಿಕ್)**

ಆಧುನಿಕ ಯುಗದಲ್ಲಿ ಮೊಜಾಯಿಕ್ ನಂತರ ಟೈಲ್ಸ್‌ಗಳನ್ನು ಉಪಯೋಗಿಸಿಕೊಂಡು ಮ್ಯೂರಲ್ ರಚನೆ ಮಾಡುತ್ತಾರೆ. ಮನೆಗಳಿಗೆ ಸಹಜವಾಗಿ ಬಳಸುವಂತಹ ಬಣ್ಣ ಬಣ್ಣದ ಸೆರಾಮಿಕ ಟೈಲ್ಸ್‌ಗಳನ್ನು ರಚಿಸುವುದು ಹಿಂದಿನ ಕಾಲದಲ್ಲಿ ಇದ್ದಿದ್ದಾದರೂ ಇಂದು ಆಧುನಿಕತೆಯಿಂದ ಕೂಡಿದಂತಹ ಕಲಾಕೃತಿಗಳಿಗೆ ಹೆಚ್ಚಿನ ಪ್ರೋತ್ಸಾಹವನ್ನು ನೀಡುತ್ತಿದ್ದಾರೆ. ಇಂತಹ ಕಲೆಯನ್ನು ದೇವಾಲಯ, ಚರ್ಚು, ಮನೆಗಳಲ್ಲಿ, ಮಠಗಳಲ್ಲಿ ಹೋಟಲ್‌ಗಳಲ್ಲಿ ಕಾಣಬಹುದು. ಯಾವುದೇ ವಿಷಯ ಮೇಲೆ ಸೆರಾಮಿಕ್ ಚಿತ್ರವನ್ನು ರಚಿಸಬೇಕಾದರೆ ವಿಶಾಲವಾದ ಜಾಗದಲ್ಲಿ ದೃಶ್ಯಮಾಧ್ಯಮಕ್ಕೆ ಅನುಗುಣವಾಗಿ ಚಿತ್ರಗಳನ್ನು ಈ ಸೆರಾಮಿಕ್ ಮೊಜಾಯಿಕ್ ಟೈಲ್ಸ್‌ನಿಂದ ಕೂಡಿರುತ್ತದೆ. ರಚನೆಯ ಹಂತವು ಸ್ವಲ್ಪ ಕಷ್ಟಕರವಾದರೂ ನಿಧಾನವಾದರೂ ಕೂಡಾ ಹೆಚ್ಚಿನ ಬಾಳಿಕೆ ಬರುವಂತಹ ಮಾಧ್ಯಮವಾಗಿದೆ.ಅವರಿಗೆ ಬೇಕಾದ ಆಕಾರಗಳನ್ನು ಕತ್ತರಿಸಿಕೊಂಡು ಸಿಮೆಂಟ್ ಅಥವಾ ಕೆಮಿಕಲ್ ಅಂಟು ದ್ರಾವಕಗಳಿಂದ ಮಾಡುವುದರಿಂದ ಹೆಚ್ಚು ಸೌಂದರ್ಯ ಅಲ್ಲಿ ಕಂಡುಬರುತ್ತದೆ. ಪ್ರಕೃತಿಯಲ್ಲಿ ಸಿಗುವಂತಹ ಕಲ್ಲುಗಳನ್ನು ತಂದು ಗ್ರಾನೈಟ್ ಪೀಸುಗಳನ್ನು ಬಳಸಿಕೊಂಡು ಭಿತ್ತಿಚಿತ್ರಗಳನ್ನು ರಚಿಸಬಹುದು, ಇಂತಹ ಕಲಾಕೃತಿಗಳನ್ನು ಸಹಜವಾಗಿ ಗೋಡೆಗಳ ಮೇಲೆ ಚಿತ್ರಿಸುವುದು ಸೂಕ್ತ ಅದರಲ್ಲಿಯೇ ಮಿಶ್ರಮಾಧ್ಯಮದ ಮ್ಯೂರಲ್‌ಗಳನ್ನು ರಚಿಸುವುದು ವಾಡಿಕೆ ಏಕೆಂದರೆ ಮನೆಯ ಅಲಂಕಾರಕ್ಕಾಗಿ ಮತ್ತಷ್ಟು ಮೆರಗು ಬರುತ್ತದೆ.

**ಜೀವನ ಮತ್ತು ಪರಿಸರ**

ಈ ಭಿತ್ತಿಚಿತ್ರವನ್ನು ಗುಲ್ಬರ್ಗಾ ದಿ ಐಡಿಯಲ್ ಫೈನ್ ಆರ್ಟ್ ಕಾಲೇಜಿನ ಪ್ರಾರಂಭದ ದಾರಿಯ ಬಲಭಾಗದಲ್ಲಿ ರಚಿಸಿದ್ದು, ೪x೧೫ ಅಡಿ ಅಳತೆಯನ್ನು ಹೊಂದಿದ್ದು, ವಿ.ಜಿ. ಅಂದಾನಿ ಹಾಗೂ ಅವರ ಸಹಾಯಕರಾದ ಚಿತ್ರಲೇಖಕರಾದ ಮರತಳ್ಳಿಯವರು ರಚಿಸಿದ್ದಾರೆ.

ಈ ಭಿತ್ತಿಯಲ್ಲಿ ವಿವಿಧ ಬಣ್ಣದಿಂದ ಕೂಡಿದಂತಹ ಮೊಜಾಯಿಕ್ ಕಲ್ಲುಗಳನ್ನು ಅವರಿಗೆ ಬೇಕಾದ ಆಕೃತಿಯಲ್ಲಿ ರಚನೆ ಮಾಡಿಕೊಂಡು ಆ ನಂತರದಲ್ಲಿ ಗೋಡೆಯ ಮೇಲೆ ರೇಖಾಚಿತ್ರವನ್ನು ರಚಿಸಿ ಭಿತ್ತಿ ತಯಾರಿದ್ದಾರೆ. ಭಿತ್ತಿಯ ಬಲಭಾಗದಲ್ಲಿ ಒಬ್ಬ ಮನುಷ್ಯನು ಕೋಳಿ ಮುಖ ಪ್ರಾಣಿದೇಹವನ್ನು ಹೊಂದಿದ್ದು, ಬಿಳಿ, ಕೆಂಪು, ಹಳದಿ, ಬೂದು, ಬಣ್ಣಗಳಿಂದ ರಚಿಸಿದ್ದು ಅದರ ಪಕ್ಕದಲ್ಲಿ ಚಿಕ್ಕ ಮತ್ತು ದೊಡ್ಡ ಗಾತ್ರದ ಮರಗಳನ್ನು ರಚಿಸಿರುವುದನ್ನು ಕಾಣಬಹುದು. ಅದರ ಮೇಲ್ಭಾಗದಲ್ಲಿ ಒಬ್ಬ ಮಹಿಳೆಯು ತನ್ನ ರೆಕ್ಕೆಗಳಿಂದ ಹಾರುತ್ತಿದ್ದು ಪಕ್ಕದಲ್ಲಿ ಒಬ್ಬ ಮಹಿಳೆಯು ಕುಳಿತ್ತಿದ್ದು, ನೀಲಿ ಮತ್ತು ಬಿಳಿಯ ಬಣ್ಣದಿಂದ ರಚಿಸಿದ್ದಾರೆ. ಅದರ ಮೇಲ್ಭಾಗದಲ್ಲಿ ಚಂದ್ರ ಅವರ ಎಡಭಾಗದಲ್ಲಿತೆಂಗಿನಮರ ಮತ್ತು ಅದರ ಪಕ್ಕದಲ್ಲಿ  ಒಬ್ಬ ನಿಂತಿರುವ ವ್ಯಕ್ತಿಯನ್ನು ಮತ್ತು ಒಂದೇ ದೇಹದಲ್ಲಿ ಎರಡು ತಲೆಗಳನ್ನು ಜೋಡಿಸಿರುವುದು ಕಾಣುತ್ತೇವೆ. ಇಲ್ಲಿ ಹಸಿರು, ನೀಲಿ, ಬಿಳಿ, ಕೆಂಪು, ಮೊಸಾಯಿಕ್ ಬಣ್ಣದ ಕಲ್ಲುಗಳಿಂದ ರಚಿಸಿದ್ದು, ಇನ್ನೂ ಈ ಭಿತ್ತಿಯು ಅಪೂರ್ಣಗೊಂಡಂತೆ ಕಾಣುತ್ತದೆ.

### ಡ್ರ್ಯಾಗನ್ ವಿನ್ಯಾಸ

ಈ ಭಿತ್ತಿ ಮಾಧ್ಯಮವನ್ನು ಹಂಪಿಯಲ್ಲಿರುವ ಪಾಶ್ಚಾತ್ಯ ಕಲಾವಿದರಾದ ರಾಬರ್ಟ್‌ರವರ ಅವರ ಸ್ಟೂಡಿಯೋದ ಬಾಗಿಲ ಎಡ ಮತ್ತು ಬಲಭಾಗದಲ್ಲಿ ರಚಿಸಿದ್ದು, ೮x೧೦ ಅಡಿ ಅಳತೆಯನ್ನು ಹೊಂದಿದ್ದು. ೨೦೧೨ರಲ್ಲಿ ರಚಿಸಿದ್ದಾರೆ. ಈ ಭಿತ್ತಿಯಲ್ಲಿ ಎರಡು ಡ್ರ್ಯಾಗನ್ ಚಿತ್ರಗಳನ್ನು ರಚಿಸಿರುವುದನ್ನು ಕಾಣಬಹುದು. ಭಿತ್ತಿಯ ಚಿತ್ರದ ಬಲಭಾಗದಲ್ಲಿ ರಚಿಸಿರುವಂತ ಡ್ರ್ಯಾಗನ್ ಮುಖವನ್ನು ಹಳದಿ, ಹಸಿರು, ಕೆಂಪು ಮತ್ತು ಕಪ್ಪು ಬಣ್ಣದಿಂದ ರಚಿಸಲಾಗಿದೆ. ಇದು ನಾಲ್ಕು ಕಾಲಗಳನ್ನು ಮತ್ತು ಬೆರಳುಗಳ ಕೊನೆಯ ಭಾಗದಲ್ಲಿ ಉಗುರುಗಳನ್ನು ಕಾಣುತ್ತೇವೆ. ಎಡಭಾಗದಲ್ಲಿರುವ ಡ್ರ್ಯಾಗನ್ ಚಿತ್ರದಲ್ಲಿ ನಾಲ್ಕು ನಾಲಿಗೆಯನ್ನು ಹೊರಚಾಚಿರುವಂತೆ ಕಾಣುತ್ತೇವೆ. ದಪ್ಪನೆಯ ಕಣ್ಣುಗಳುಳ್ಳ ಈ ಚಿತ್ರದಲ್ಲಿಸಂಪೂರ್ಣವಾಗಿಬಾಯಿಯನ್ನು ತೆಗೆದಿದ್ದು ಹಲ್ಲುಗಳು ಸಹಾ ಕಾಣಿಸುತ್ತವೆ. ಹಿಂಭಾಗದಲ್ಲಿ ನೀಲಿಬಣ್ಣದ ಟೈಲ್‌ಗಳನ್ನು ಹಾಕಿದ್ದು, ಈ ಎರಡು ಚಿತ್ರಗಳ ಮಧ್ಯಭಾಗದಲ್ಲಿ ಅದರ ಮೊಟ್ಟೆಯನ್ನು ಕಾಣುತ್ತೇವೆ. ಅದನ್ನು ಬಿಳಿಯ ಬಣ್ಣದಿಂದ ರಚಿಸಿದ್ದು, ಒಟ್ಟಾರೆಯಾಗಿ ಈ ಸಂಯೋಜನೆಯನ್ನು ಉತ್ತಮವಾಗಿ ರಚಿಸಿದ್ದಾರೆ.

### ಸಮುದ್ರದ ಜೀವಿ

ಈ ಭಿತ್ತಿಯು ಮೈಸೂರಿನ ಕಾವಾ ಕಾಲೇಜಿನಲ್ಲಿದ್ದು ಅಲ್ಲಿನ ವಿದ್ಯಾರ್ಥಿಗಳು ರಚಿಸಿದ್ದು, ೨x೪ ಅಡಿ ಅಳತೆಯನ್ನು ಹೊಂದಿದೆ.

ಭಿತ್ತಿಯನ್ನು ನೋಡಿದ ಕೂಡಲೇ ನೆನಪಿಗೆ ಬರುವುದು ಸಮುದ್ರದ ಜೀವಿಯಂತೆ ಕಾಣುತ್ತಿದ್ದು ನೀರಿನೊಳಗಿರುವಂತೆ ಕಾಣುತ್ತದೆ. ಇದನ್ನು ಹಳದಿ ಮತ್ತು ಬಿಳಿಯ ಬಣ್ಣವನ್ನು ಹೊಂದಿದ್ದು. ಎಂಟು ಕಾಲುಗಳನ್ನು ಹೊಂದಿದೆ. ಇದರ ಪಕ್ಕದಲ್ಲಿ ಮೀನುಗಳು ಹೋರಾಡುತ್ತಿದ್ದು. ಏಡಿಗಳನ್ನು ಸಹ ಕಾಣಬಹುದಾಗಿದೆ.ಅವುಗಳನ್ನು ಕೆಂಪು ಬಣ್ಣದಿಂದ ಕೂಡಿದ್ದು ನೀರಿನ ಭಾಗವನ್ನು ನೀಲಿ ಮತ್ತು ಬೂದು ಬಣ್ಣದ ಸೆರಾಮಿಕ್ಸ್ ಅಥವಾ ಮೊಜಾಯಿಕ್ ಕಲ್ಲುಗಳನ್ನು ಬಳಸಿ ರಚಿಸಿದ್ದಾರೆ.



ಪರಿಸರ ಮತ್ತು ಜೀವನ



ಡ್ರ್ಯಾಗನ್ ವಿನ್ಯಾಸ



ಸಮುದ್ರದ ಜೀವಿ

### ಪರಿಸರ ಮತ್ತು ಹೆಣ್ಣುಮಗಳು

ಈ ಭಿತ್ತಿಯನ್ನು ದಿ ಐಡಿಯಲ್ ಫೈನ್ ಆರ್ಟ್‌ನ ವಿದ್ಯಾರ್ಥಿಗಳು ರಚಿಸಿದ್ದು, ೧೦x೮ ಅಡಿ ಅಳತೆಯಲ್ಲಿ ರಚಿಸಿದ್ದಾರೆ.

ಈ ಭಿತ್ತಿಯ ಮಧ್ಯಭಾಗದಲ್ಲಿ ಒಂದು ಹುಡುಗಿಯು ನಿಂತಿದ್ದು, ಅವಳು ಮೈ ಬಣ್ಣವನ್ನು ಕಂದುಬಣ್ಣದಿಂದ ರಚನೆ ಮಾಡಿ ಕೂದಲನ್ನು ಕಪ್ಪುಬಣ್ಣದಿಂದ ಹಾಗೂ ಅವಳು ಸುತ್ತಿರುವ ವಸ್ತ್ರಗಳನ್ನು ಬಿಳಿ, ಹಳದಿ, ಕಂದು ಬಣ್ಣದ ಮೊಸಾಯಿಕ್ ಟೈಲ್ಸ್‌ಗಳನ್ನು ಬಳಸಿ ರಚಿಸಿದ್ದಾರೆ. ಹಿನ್ನೆಲೆಯಲ್ಲಿ ಬಿಳಿ ಮತ್ತು ಕಂದು ಬಣ್ಣದಿಂದ ರಚಿಸಿದ್ದಾರೆ. ಬಲಭಾಗದಲ್ಲಿ ಒಬ್ಬ ಯುವತಿಯು ಕುಳಿತ್ತಿದ್ದು. ಇನ್ನೊಬ್ಬನ ಹತ್ತಿರ ಮಾತುಕಥೆಯನ್ನು ನಡೆಸುತ್ತಿರುವುದನ್ನು ಕಾಣುತ್ತೇವೆ. ಅದರ ಪಕ್ಕದಲ್ಲಿ ನಿಸರ್ಗ ಕೂಡ, ಹಳದಿ,ಬಿಳಿ, ಕೇಸರಿ ಬಣ್ಣದ ಸೆರಾಮಿಕ್ ಕಲ್ಲುಗಳನ್ನು ಬಳಸಿ ರಚಿಸಿದ್ದಾರೆ.

### ಮಹಿಳೆ ಮತ್ತು ಮೀನುಗಳು

ಈ ಭಿತ್ತಿಯು ಬೆಂಗಳೂರಿನ ಕಬ್ಬನ್ ಪಾರ್ಕ್‌ನಲ್ಲಿರುವಂತಹ ಮತ್ಸ್ಯಾಲಯ ಉಪಹಾರ ಗೃಹದ ಹೊರ ಗೋಡೆಯ ಮೇಲೆ ರಚಿಸಿದ್ದು, ೧೦x೮ ಅಡಿ ಅಳತೆಯನ್ನು ಹೊಂದಿದೆ.

ಈ ಭಿತ್ತಿಯಲ್ಲಿ ಹೆಣ್ಣಿನ ಆಕಾರವನ್ನು ರಚಿಸಿ ಗೋಡೆಯ ಮೇಲೆ ಕುಳಿರುವಂತೆ ಕಾಣುತ್ತದೆ. ಅದರ ಪಕ್ಕದಲ್ಲಿ ವಿವಿಧ ರೀತಿಯ ಬೆಳೆದಿರುವ ಗಿಡಗಳಂತೆ ಕಾಣುತ್ತವೆ. ಈ ಭಿತ್ತಿಯಲ್ಲಿ ಮೂರು ದೊಡ್ಡ ಮೀನುಗಳು ಎರಡು ಚಿಕ್ಕ ಮೀನುಗಳನ್ನು ಕಾಣುತ್ತೇವೆ. ಇದನ್ನು ಕೆಂಪು, ಬೂದು, ಹಳದಿ ಬಣ್ಣಗಳಿಂದ ರಚಿಸಿದ್ದಾರೆ. ನೀರಿನ ಹಳ್ಳಗಳನ್ನು ಸಹ ಇಲ್ಲಿ ನೋಡಬಹುದು. ಕೆಳಗಿನ ಭಾಗದಲ್ಲಿ ಕಪ್ಪು ಮತ್ತು ನೀಲಿ ಬಣ್ಣದ ಸಿರಾಮಿಕ್ ಕಲ್ಲುಗಳನ್ನು ರಚಿಸಿರುವುದನ್ನು ಕಾಣಬಹುದು.

### ರಚನಾ ವಿಧಾನ

ಸಮತಟ್ಟಾದ ಗೋಡೆಯ ಮೇಲೆ ಮೊದಲಿಗೆ ರೇಖಾಚಿತ್ರವನ್ನು ಮಾಡಿಕೊಂಡು ನಂತರದಲ್ಲಿ ಮೊಜಾಯಿಕ್ ಕಲ್ಲುಗಳಿಗೆ ಒಂದು ಆಕಾರವನ್ನು ಕೊಟ್ಟು. ಗೋಡೆಯ ಮೇಲೆ ಸಿಮೆಂಟ್ ಇಲ್ಲ ಅಂಟು ದ್ರಾವಕವನ್ನು ಲೇಪಿಸಿ ನಮಗೆ ಬೇಕಾದ ಆಕೃತಿಗಳಂತೆ ಜೋಡಣೆ ಮಾಡಬೇಕು. ಒಂದು ಅಥವಾ ಎರಡು ದಿನಗಳ ನಂತರದಲ್ಲಿ ನೀರಿನಿಂದ ಅಥವಾ ಇನ್ನಾವುದೇ ದ್ರವರೂಪದ ಮಾಧ್ಯಮದಿಂದ ತೊಳೆಯಬಹುದು. ಬಳಸುವ ಪರಿಕರಗಳು:- ಬಣ್ಣದ ಕಲ್ಲಿನ ಚೂರುಗಳು, ಸಿಮೆಂಟ್, ಅಂಟುದ್ರಾವಕ, ಮರಳು ಇತ್ಯಾದಿ.

ಆಧುನಿಕ ಕಾಲದಲ್ಲಿ ಕೋಲಾಜ್ ಚಿತ್ರರಚನೆಯಂತೆ ವ್ಯಕ್ತಪಡಿಸುವ ರೀತಿಯಲ್ಲಿ ಈ ಸೆರಾಮಿಕ ಮಾಧ್ಯಮವು ಭಿತ್ತಿಯ ಚಿತ್ರವನ್ನು ವ್ಯಕ್ತಪಡಿಸುವಲ್ಲಿ ಪ್ರಮುಖವಾದ ಮಾಧ್ಯಮವಾಗಿದೆ. ಕೊಲಾಜ್ ಕಲೆಯಲ್ಲಿ ಕಾಗದ ಮತ್ತು ಬಟ್ಟೆಯ ತುಂಡುಗಳನ್ನು ಬಳಸಿದರೆ ಸೆರಾಮಿಕ್ ಕಲೆಯಲ್ಲಿ ವಿವಿಧ ಬಣ್ಣದಿಂದ ಕೂಡಿದ್ದು, ಅವುಗಳನ್ನು ಆಧುನಿಕ ಕಲಾವಿದರು ಭಿನ್ನ ವಿಭಿನ್ನವಾಗಿ ಸೌಂದರ್ಯದ ಹಿನ್ನೆಲೆಯಲ್ಲಿ ರಚನೆ ಮಾಡುತ್ತಿದ್ದಾರೆ.

* * *

ಅಧ್ಯಾಯ - ಎಂಟು

# ಭಿತ್ತಿಚಿತ್ರ/ಶಿಲ್ಪಗಳ ಮೇಲಾದ ಪ್ರಭಾವ, ಪ್ರೇರಣೆ, ತಂತ್ರ, ಶೈಲಿ

ಶಿಲ್ಪಕೃತಿ - ಘನಮಾಧ್ಯಮವನ್ನು ಕೆತ್ತುತೆಗೆದು ನಿರ್ದಿಷ್ಟ ಸ್ವರೂಪಕ್ಕೆ ರೂಪಾಂತರಗೊಳ್ಳುವರೆಗೆ ಪ್ರಯತ್ನಿಸುವ ಪ್ರಕ್ರಿಯೆಯಾದರೆ ಚಿತ್ರಕಲಾಕೃತಿ ಸಮತಟ್ಟಾದ ಬಟ್ಟೆ, ಗೋಡೆ, ಕಾಗದ ಇತ್ಯಾದಿಗಳ ಮೇಲೆ ಬಣ್ಣ ವಿಭಿನ್ನ ಮೇಲ್ಮೈ ಪದರುಗಳನ್ನು ಸೃಷ್ಟಿಸಲು ಸಾಧ್ಯವಾಗುವ ಪರಿಕರಗಳನ್ನು ಹಚ್ಚಿ ಅಥವಾ ಅಂಟಿಸಿ ನಿರ್ದಿಷ್ಟವಾದ ಚಿತ್ರಕಲಾಕೃತಿಯನ್ನು ರಚಿಸುವಂತಹುದು. ಈ ಎರಡು ಸಾಧ್ಯತೆಗಳ ಸಮ್ಮಿಶ್ರಣವಾಗಿ ಭಿತ್ತಿರೂಹು ಮಾಧ್ಯಮ ರೂಪುಗೊಂಡಿತು. ಆಧುನಿಕವಾಗಿ ಅನೇಕ ರೀತಿಯ ಮಿಶ್ರಮಾಧ್ಯಮಗಳ ಬಳಕೆಯಿಂದ ವಿಶಿಷ್ಟವಾದ ಒಂದು ಹೊಸ ಆವಿಷ್ಕಾರದ ಕಲಾಭಿವ್ಯಕ್ತಿಗಾಗಿ ಮ್ಯೂರಲ್ ಮಾಧ್ಯಮ ಜನಪ್ರಿಯತೆಯನ್ನು ಸಾಧಿಸಿತು.

ಭಿತ್ತಿರೂಹುಗಳು ಆಧುನಿಕವಾಗಿ ಬೇಡಿಕೆಯನ್ನು ಹೆಚ್ಚಿಸಿಕೊಂಡು ಜನಪ್ರಿಯವಾಗುತ್ತಿದ್ದಂತೆ ಸಾಮಾನ್ಯರು ಕೂಡಾ ತಮ್ಮ ಹೊಸ ಕಟ್ಟಡಗಳ ಅಂದ ಹೆಚ್ಚಿಸುವ ಒಂದು ಅಂಶವಾಗಿ ಆಲೋಚಿಸುವಂತಾಯಿತು. ಅನೇಕ ಕಲಾವಿದರು ಯಾಂತ್ರಿಕವಾಗಿ ಮ್ಯೂರಲ್‌ಗಳ ರಚನೆ ಮಾಡಿದ್ದುಉಂಟು. ಕಲೆಯ ಕ್ಷೇತ್ರಕ್ಕೆ ಪ್ರೇಕ್ಷಕರನ್ನು ಸೃಷ್ಟಿಸುವ ಮಹತ್ವಾಕಾಂಕ್ಷೆ ಹೊಂದಿದ್ದವರು ತೀರಾ ಕಡಿಮೆ ಎನ್ನಬಹುದು, ಸೃಜನಶೀಲ ಕಲಾವಿದರಿಂದ ಕಲಾಮಾಧ್ಯಮ ತನ್ನ ಹೊಸ ಸಾಧ್ಯತೆಗಳಿಂದಾಗಿ ವಲಯ ವಿಸ್ತರಿಸಿಕೊಳ್ಳುತ್ತಿದ್ದೆ.

## ಪ್ರಭಾವ

ಆಧುನಿಕ ಕಾಲದಲ್ಲಿ ಕಲಾವಿದರು ಭಿತ್ತಿಚಿತ್ರ ಮತ್ತು ಭಿತ್ತಿಶಿಲ್ಪ ಮಾಧ್ಯಮಗಳಲ್ಲಿ ಹೊಸತರನಾಗಿ ರಚಿಸಿರುವುದು ಮತ್ತು ರಚಿಸುತ್ತಿರುವುದನ್ನು ಕಾಣುತ್ತೇವೆ. ಈ ರಚನೆಯ ಹಿಂದೆ ಪಾಶ್ಚಾತ್ಯ ಕಲಾವಿದರ ಕಲಾಕೃತಿಗಳಿಂದ ಹಾಗೂ ಪ್ರಕೃತಿಯ ವಿಕೋಪಗಳಿಂದ ಆಗುವಂತಹ ಘಟನೆಗಳನ್ನು ಆಧರಿಸಿ. ವಿಜ್ಞಾನ ಅತಿ ವೇಗವಾಗಿ ಬೆಳೆಯುತ್ತಿರುವುದರಿಂದ ಕಾಲಾಕ್ಕನುಗುಣವಾಗಿ ಆಗುವಂತ ಬದಲಾವಣೆಗಳು. ಆಧುನಿಕ ಕಲಾವಿದರ ರಚಿಸುವ ಭಿತ್ತಿಚಿತ್ರ ಮತ್ತು ಭಿತ್ತಿಶಿಲ್ಪ ಆಧುನಿಕ ಶೈಲಿಯಲ್ಲಿ ರಚನೆ ಮಾಡಲು ಸಹಾಯ ಮಾಡುತ್ತವೆ. ಅಲ್ಲದೆ, ಆಧುನಿಕ ಕಲಾವಿದರು ಬೇರೆ ಬೇರೆ ದೇಶ, ರಾಜ್ಯಗಳಿಗೆ ಪ್ರವಾಸ ಹೋದಂತಹ

ಸಂದರ್ಭದಲ್ಲಿ ಅಲ್ಲಿ ಚಿತ್ರ ಮತ್ತು ಶಿಲ್ಪಗಳನ್ನು ನೋಡಿ ಮತ್ತು ಅವರ ಕಲೆಯ ಬಗ್ಗೆ ತಿಳಿದುಕೊಂಡು ಅವರಿಗಿಂತ ಭಿನ್ನಾವಿಭಿನ್ನವಾಗಿ ರಚನೆ ಮಾಡಲು ಆರಂಭಿಸುತ್ತಾರೆ. ಅದಲ್ಲದೇ ನಮ್ಮ ಮತ್ತು ಬೇರೆ ಕಡೆಯಿಂದ ಬಂದಂತಹ ಕಲಾವಿದರು ರಚಿಸುವಂತ ಭಿತ್ತಿಚಿತ್ರ ಮತ್ತು ಶಿಲ್ಪಗಳನ್ನು ನೋಡಿ ಆಧುನಿಕ ಕಲಾವಿದರು. ಪ್ರಭಾವಿತರು, ಅಲ್ಲದೇ ಕಲಾಕೃತಿಗಳಲ್ಲಿ ಹೊಸತನ ಸೃಜನಾತ್ಮಕತೆಯಿಂದ ಕಲಾಕೃತಿಗಳನ್ನು ರಚಿಸತೊಡಗಿದರು.

## ಪ್ರೇರಣೆ

ಆಧುನಿಕ ಕಾಲದಲ್ಲಿ ಭಿತ್ತಿಚಿತ್ರ ಮತ್ತು ಭಿತ್ತಿಶಿಲ್ಪಗಳನ್ನು ರಚಿಸುವುದರ ಜೊತೆಗೆ ಅದರಲ್ಲಿ ಹೊಸತನಕ್ಕೆ ಹೆಚ್ಚಿನ ಒತ್ತು ನೀಡಿದರಿಂದಾಗಿ ಆಧುನಿಕ ಕಲಾವಿದರು ಎಲ್ಲಾ ಮಾಧ್ಯಮಗಳಲ್ಲಿ ಒಬ್ಬರಿಗಿಂತ ಇನ್ನೊಬ್ಬರಂತೆ ಭಿನ್ನಾವಿಭಿನ್ನವಾಗಿ ಭಿತ್ತಿಚಿತ್ರ ಶಿಲ್ಪಗಳನ್ನು ರಚಿಸತೊಡಗಿದರು. ಹೊರ ದೇಶಗಳಲ್ಲಿ ಹೆಚ್ಚು ಬೇಡಿಕೆ ಇಂತಹ ಕಲಾಕೃತಿಗಳಿಗೆ ಇದ್ದಿದ್ದರಿಂದ ಮತ್ತು ಅವರು ರಚಿಸುವಂತ ಹೊಸತನವನ್ನು ಕಂಡು ಸಂಘ ಸಂಸ್ಥೆಗಳಾಗಲಿ ಅಕಾಡೆಮಿಗಳಾಗಲಿ ಪ್ರಶಸ್ತಿಗಳನ್ನು ಘೋಷಿಸತೊಡಗಿದವು. ಅಲ್ಲದೇ ಶ್ರೀಮಂತರು ತಮ್ಮ ಮನೆಯ ಸೌಂದರ್ಯವನ್ನು ಹೆಚ್ಚಿಸಿಕೊಳ್ಳಲು ಗೋಡೆಯ ಮೇಲೆ ಭಿತ್ತಿಚಿತ್ರ ಮತ್ತು ಶಿಲ್ಪಗಳನ್ನು ರಚಿಸಿಕೊಂಡಂತೆಲ್ಲಾ ಸಂಘಸಂಸ್ಥೆಗಳು ಕಲ್ಯಾಣಮಂಟಪ, ಚರ್ಚುಗಳ ಮೇಲೆ ರಚಿಸಿಕೊಳ್ಳತೊಡಗಿದರು. ಇದರಿಂದಾಗಿ ಕಲಾವಿದರಿಗೆ ಪ್ರೇರಣೆ ನೀಡಿದಂತಾಗಿ ಆಧುನಿಕ ಕಲಾವಿದರು ಪ್ರಸ್ತುತ ಸಂದರ್ಭದಲ್ಲಿ ಸೃಜನಾತ್ಮಕತೆಯಿಂದ ಕೂಡಿದಂತಹ ಭಿತ್ತಿಚಿತ್ರ ಮತ್ತು ಭಿತ್ತಿಶಿಲ್ಪಗಳ ರಚನೆಯಲ್ಲಿ ನಿರಂತವಾಗಿ ತಮ್ಮನ್ನು ತೊಡಗಿಸಿಕೊಂಡರು.

## ತಂತ್ರ

ಆಧುನಿಕ ಕಲಾವಿದರು ಭಿತ್ತಿಚಿತ್ರ ಅಥವಾ ಭಿತ್ತಿಶಿಲ್ಪದ ರಚನೆ ಬಳಸುವಂತ ಯಾವುದೇ ಮಾಧ್ಯಮವೇ ಆಗಿರಲಿ, ತನ್ನ ತಂತ್ರಗಾರಿಕೆಯಲ್ಲಿ ಬರುವಂತಹದ್ದು, ಅವರ ಕಲಾತ್ಮಕ ತಂತ್ರ ನಿರೂಪಣೆಯಿಂದಲೇ ಒಂದು ಕಲಾಕೃತಿಯು ಜೀವಂತಿಕೆಯನ್ನು ಪಡೆದುಕೊಳ್ಳುವುದು ಸಾಧ್ಯ. ಕರ್ನಾಟಕದ ಸಮಕಾಲೀನ ಕಲಾವಿದರು ರಚಿಸುವಂತಹ ತಂತ್ರ ನಿರೂಪಣೆಯು ಸಾಕಷ್ಟು ವಿಕಾಸವನ್ನು ಹೊಂದುತ್ತಿದೆ. ಎಲ್ಲಾರು ಸಾಮಾನ್ಯವಾಗಿ ಮೊದಲಿಗೆ ಒಂದು ಡ್ರಾಯಿಂಗ್ ಶೀಟ್‌ನಲ್ಲಿ ಏಕಾಂತವಾಗಿ ಚಿಂತಿಸುತ್ತಾ ಭಾವ ಲಯದೊಂದಿಗೆ ಚಿತ್ರಸಲು ಪ್ರಾರಂಭಿಸುತ್ತಾರೆ. ನಂತರ ತಮಗೆ ಬೇಕಾದ ಬಣ್ಣಗಳಿಂದ ಚಿತ್ರಕಲಾಕೃತಿಗಳ ಭಾಗಗಳಿಗೆ ಬಣ್ಣವನ್ನು ಲೇಪಿಸುತ್ತಾರೆ. ಕಲಾವಿದರು ರಚಿಸಿದ ಚಿತ್ರರೇಖೆಗಳಿಂದ ರಚಿತವಾದ ಆಕೃತಿಗಳ ಪ್ರಭಾವ ಭಾವ, ಗುಣಗಳಿಗೆ ಅನುಸಾರವಾಗಿ ವರ್ಣಗಳನ್ನು ಲೇಪಿಸುತ್ತಾರೆ. ಇನ್ನು ಕೆಲವು ನೇರವಾಗಿ ಭಿತ್ತಿ ರಚನೆ ಮಾಡುವಾಗ ಅನೇಕ ತಂತ್ರಗಳನ್ನು ಉಪಯೋಗ ಮಾಡುತ್ತಾರೆ.ನೀರಿನ ಜೊತೆ Pigmentನ್ನು ಕರಗಿಸಿಕೊಂಡು ಹಸಿ ಇದ್ದಾಗ ಅದರ ಮೇಲೆ ಬಳಸುತ್ತಾರೆ. ಆಧುನಿಕ ಕಾಲದಲ್ಲಿ ಕಲಾವಿದರು ಅಕ್ರಾಲಿಕ್, ಎಲ್.ಎಮ್.ಎಲ್ ಬಣ್ಣಗಳಿಂದ ಭಿತ್ತಿಚಿತ್ರಗಳನ್ನು ರಚನೆಮಾಡುತ್ತಿದ್ದು. ಅದು ಸಹ ಹೊಸ ಹೊಸ ಸೃಜನಾತ್ಮಕತೆಯಿಂದ ಕೂಡಿದ ಭಿತ್ತಿಚಿತ್ರಗಳನ್ನು ರಚಿಸಿಕೊಂಡು ಬರುತ್ತಿದ್ದಾರೆ.

ಆಧುನಿಕ ಕಲಾವಿದ ತಂತ್ರ ನಿರೂಪಣೆಯಲ್ಲಿನ ರೇಖೆ, ಮೈವಳಿಕೆ ಮತ್ತು ಅವಕಾಶಗಳು ಆಧುನಿಕ ಭಿತ್ತಿ ವರ್ಣಗಳ ಪ್ರತೀಕಗಳಾಗಿ ಪ್ರಕಟಗೊಳ್ಳುತ್ತವೆ.

ಆಧುನಿಕ ಶಿಲ್ಪ ಕಲಾವಿದರುಗಳು ಅವರು ರಚಿಸುವಂತಹ ಯಾವುದೇ ಮಾಧ್ಯಮವಾಗಿರಬಹುದು. ಅವರದೇ ಆದ ತಂತ್ರಗಳನ್ನು ಉಪಯೋಗಿಸಿರುವುದನ್ನು ಕಾಣುತ್ತವೆ. ಎಲ್ಲಾ ಮಾಧ್ಯಮಗಳಲ್ಲಿಯೂ ಕೂಡಾ ಕರಡು ಚಿತ್ರ ರಚನೆ ಮಾಡಿ ಭಿತ್ತಿಶಿಲ್ಪಗಳನ್ನು ರಚನೆ ಮಾಡಿದರೆ ಮರದ ಮಾಧ್ಯಮದಲ್ಲಿ ಮರವನ್ನು ಕಿತ್ತು ತೆಗೆಯುತ್ತಾ ಹೊದಂತೆಲ್ಲಾ ಒಂದು ಆಕಾರ ಸೃಷ್ಟಿಯಾಗುತ್ತದೆ. ಅದೇ ರೀತಿಯಾಗಿ ಸಿಮೆಂಟ್ ಮಾಧ್ಯಮದಲ್ಲಿಯೂ ಕೂಡ ಎರಡು ರೀತಿಯ ತಂತ್ರಗಳನ್ನು ಬಳಸಿರುವುದನ್ನು ಕಾಣುತ್ತೇವೆ. ಮೊದಲನೆಯದು ಮೆತ್ತಿ ತೆಗೆಯುವ ಚಿತ್ರವಾದರೆ ಎರಡನೆಯದು ಕೊರೆದು ರಚನೆ ಮಾಡುವ ತಂತ್ರವಾಗಿದೆ. ಆಧುನಿಕ ಕಾಲದಲ್ಲಿ ಭಿನ್ನಾವಿಭಿನ್ನವಾಗಿ ಒಬ್ಬರಿಗಿಂತ ಒಬ್ಬರಂತೆ ತನ್ನ ಸೃಜನಾತ್ಮಕತೆಯಿಂದ ಕೂಡಿದ ತಂತ್ರಗಳನ್ನು ಬಳಸುತ್ತಿರುವುದನ್ನು ಕಾಣುತ್ತೇವೆ. ಹೀಗೆ ವಿವಿಧ ತಂತ್ರಗಳನ್ನು ಉಪಯೋಗಿಸಿಕೊಂಡು ಆದ್ದರಿಂದ ಪ್ರಭಾವಿತರಾಗಿ ತನ್ನನ್ನು ಭಿತ್ತಿಚಿತ್ರ ಮತ್ತು ಭಿತ್ತಿಶಿಲ್ಪವನ್ನು ರಚಿಸುವುದಕ್ಕೆ ಪ್ರೇರಿತರಾದರು.

**ಶೈಲಿ**

ಸೌಂದರ್ಯಾ ಮೃತ ಪಾನವೇ ಕಲೆಯ ಉದ್ದೇಶ ಆತ್ಮನಂದವೇ ಅದರ ಪ್ರತಿಫಲ, ಶಿಲ್ಪಕಲೆ, ಚಿತ್ರಕಲೆ, ಸಂಗೀತಕಲೆ, ಸಾಹಿತ್ಯಕಲೆ ಇವಿಷ್ಟು ನಿಜವಾದ ಕಲೆ ಮತ್ತು ಲಲಿತಕಲೆಗಳು ಇವುಗಳ ಸ್ವರೂಪ ಸ್ವಭಾವವನ್ನು ಅನುಸರಿಸಿ ಕಣ್ಣು, ಕಿವಿಗಳ ಮೂಲಕ ಹೃದಯದಲ್ಲಿ ರಸಸ್ವಾಧವನ್ನುಂಟು ಮಾಡುತ್ತದೆ. ಇವು ತನ್ನದೇ ಆದ ವಿಶಿಷ್ಟ ಶೈಲಿಯ ಮೂಲಕ ಕಲಾರಸಿಕರಿಗೆ ಆನಂದವನ್ನು ನೀಡುತ್ತವೆ.

ಆಧ್ಯಾತ್ಮ ಹಾಗೂ ನಂಬಿಕೆಗಳತ್ತ ಒಲವು ಬೆಳಸಿಕೊಂಡಿರುವ ಆಧುನಿಕ ಕಲಾವಿದರು ತಮ್ಮ ಭಿತ್ತಿಚಿತ್ರ ಮತ್ತು ಭಿತ್ತಿ ಶಿಲ್ಪಗಳಲ್ಲೂ ಆಧ್ಯಾತ್ಮಕ ಜಿಜ್ಞಾಸೆಗಳನ್ನು ಅಮೂರ್ತತೆಯ ಆನಂತತೆಯನ್ನು ಭಿತ್ತಿಚಿತ್ರ ಮತ್ತು ಭಿತ್ತಿಶಿಲ್ಪ ರಚಿಸಲಿಕ್ಕೆ ಪ್ರಯತ್ನ ಪಟ್ಟಿದ್ದಾರೆ. ಆಧುನಿಕ ಕಲಾವಿದರು ಭಿತ್ತಿಚಿತ್ರ ಅಥವಾ ಭಿತ್ತಿ ಶಿಲ್ಪವನ್ನು ರಚಿಸಿದ ಮೇಲೆ ಅದನ್ನು ನೋಡಿ ಖುಷಿ ಪಡುವುದಕ್ಕಿಂತ ಆಧುನಿಕ ಯುಗದಲ್ಲಿ ಇನ್ನಿತರರು ನೋಡಿ ಖುಷಿ ಪಟ್ಟರೆ ಕಲಾವಿದನು ಅದನ್ನು ನೋಡಿ ಖುಷಿ ಪಡುತ್ತಾನೆ.

ಆಧುನಿಕ ಭಿತ್ತಿಚಿತ್ರ/ಶಿಲ್ಪಗಳಲ್ಲಿ ಕಲಾವಿದರು ತಮ್ಮದೇ ಆದಂತಹ ರಚನಾಶೈಲಿ ಪ್ರಭಾವ, ಮತ್ತು ಅನೇಕ ಹಿರಿಯ ಕಲಾವಿದರ ಪ್ರೇರಣೆ ಹಾಗೂ ಇವರು ತಮ್ಮ ಭಿತ್ತಿಚಿತ್ರ/ಶಿಲ್ಪಗಳಲ್ಲಿ ರಚಿಸಿರುವಂತ ತಂತ್ರಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳಲಾಗಿದೆ.

* * *

ಅಧ್ಯಾಯ - ಒಂಭತ್ತು

# ಭಿತ್ತಿಚಿತ್ರ/ಶಿಲ್ಪಕಲೆಯ ಪ್ರಮುಖ ಕಲಾವಿದರು

ಕರ್ನಾಟಕದ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆ ಎಂಬ ವಿಷಯವನ್ನು ನನ್ನ ಅಧ್ಯಾಯನಕ್ಕೆ ತೆಗೆದುಕೊಂಡು ಈ ವಿಷಯವು ತುಂಬಾ ವಿಸ್ತಾರವಾಗಿದ್ದು. ಅಧಿಯು ಕಡಿಮೆ ಇರುವುದರಿಂದ ಕರ್ನಾಟಕದ ನಾಲ್ಕು ವಿಭಾಗಗಳಾದ ಬೆಂಗಳೂರು, ಮೈಸೂರು, ಗುಲ್ಬರ್ಗಾ, ಬೆಳಗಾಂವಿ ವಿಭಾಗದಲ್ಲಿ ಕಂಡುಬರುವಂತಹ ಆಧುನಿಕ ಭಿತ್ತಿಚಿತ್ರ/ಶಿಲ್ಪಕಲೆಯನ್ನು ರಚನೆ ಮಾಡುತ್ತಿರುವಂತಹ ಕೆಲವು ಕಲಾವಿದರ ಪರಿಚಯವನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ.

ಬೆಂಗಳೂರಿನ ಆಧುನಿಕ ಕಲಾವಿದರಾದ ವೆಂಕಟಚಲಪತಿಯವರು. ತಮ್ಮ ಹಳ್ಳಿಯ ಜೀವನ ಮತ್ತು ಅಲ್ಲಿನ ಜನರ ಮೇಲಿನ ಚಿತ್ರಗಳನ್ನು ಚಿತ್ರಿಸುತ್ತಿದ್ದರು. ರಾಜ್ಯದ ಬಹುತೇಕ ಕಲಾಶಾಲೆಗಳಲ್ಲಿ ಸಭೆ ಸಮಾರಂಭಗಳಲ್ಲಿ ಮತ್ತು ಸಮ್ಮೇಳನಗಳಲ್ಲಿ ಸಾವಿರಾರು ಕಲಾಭಿಮಾನಗಳ ಸಮ್ಮುಖದಲ್ಲಿ ಶಿಲ್ಪದ ಪ್ರತ್ಯಕ್ಷಿಕೆಗೆ ಇವರು ಹೆಸರಾಗಿದ್ದಾರೆ. ೧೯೮೦-೮೫ ರಿಂದ ವೆಂಕಟಚಲಪತಿಯವರು ಭಿತ್ತಿಯ ಎಲ್ಲಾ ಮಾಧ್ಯಮಗಳಲ್ಲಿಯೂ ಮಾಡಿರುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ ಗಣೇಶ ಟೆರ್ರಾಕೋಟಾ ಸೂರ್ಯದೇವ ಮೈಸೂರಿನ ಪ್ರಾಣಿ ಸಂಗ್ರಹಾಲಯ ಟೆರ್ರಾಕೋಟಾ ಮಾಧ್ಯಮದಲ್ಲಿ ರಚಿಸಿದ್ದು, ಯಕ್ಷಗಾನಕ್ಕೆ ಸಂಬಂಧಿಸಿದಂತೆ. ಭರತನಾಟ್ಯಕ್ಕೆ ಸಂಬಂಧಿಸಿದಂತೆ ಭಿತ್ತಿಚಿತ್ರರಚನೆ ಮಾಡಿದ್ದಾರೆ. ೧೯೮೫ರಲ್ಲಿ ಕಲ್ಲಿನಲ್ಲಿ ಮಾಡಿದ ಮ್ಯೂರಲ್ ಶಿಲ್ಪದ ವಿವಿಧ ಮಾಧ್ಯಮಗಳಾ ತಂತ್ರ, ಮತ್ತು ಯಂತ್ರಗಳಲ್ಲಿ ನಿರತಂರವಾಗಿ ತಮ್ಮನ್ನು ತೊಡಗಿಸಿಕೊಂಡಿರುವ ಇತ್ತೀಚಿನ ದಿನಗಳಲ್ಲಿ ಫೈಬರ್‌ಗ್ಲಾಸ್ ಮಾಧ್ಯಮಕ್ಕೆ ಹೆಚ್ಚಿನ ಒಲವು ತೋರಿಸಿದ್ದಾರೆ.

ವೆಂಕಟಚಲಪತಿಯವರು ಇತ್ತೀಚಿನ ಅಕಾಡೆಮಿಯಲ್ಲಿ ಚಿತ್ರಯಾತ್ರೆಗಾಗಿ ವುಮಾನ್ ನ್ಯೂಡ್ ಫ್ಲವರ್ ಗ್ಲಾಸನ ಮಾಧ್ಯಮದಲ್ಲಿ ರಚಿಸಿದ್ದಾರೆ. ೧೯೯೫-೧೯೯೮ ಲಲಿತಕಲಾವತಿಯಿಂದ ಹಲವಾರು ಕಲಾಶಾಲೆಗಳಲ್ಲಿ ಪ್ರತ್ಯಕ್ಷಿಕೆ ಭಾವಚಿತ್ರ ಮತ್ತು ಸಮಕಾಲೀನ ಶಿಲ್ಪ ಮತ್ತು ಚಿತ್ರಗಳನ್ನು ರಚಿಸಿದ್ದಾರೆ.

ಶಿಲ್ಪಕಲಾ ಅಕಾಡೆಮಿ 'ಶಿಲ್ಪ ಬ್ರಹ್ಮ' ಎನಿಸಿದಂತಹ ನವ್ಯ ಶಿಲ್ಪಕಲಾಕೃತಿಗಳ ಕಾಲ ಘಟಕದಲ್ಲಿ ಪ್ರಮುಖರಾದಂತಹ ಚಲಪತಿಯವರು ಭಾರತದ ಸಮಕಾಲೀನ ಅನೇಕ ನವ್ಯಶಿಲ್ಪಗ ವಿಷಯದ ಬಾಂಧವ್ಯವನ್ನು ಹೊದಿದ್ದಾರೆ.

ಮತ್ತೊಬ್ಬ ಕಲಾವಿದರಾದ ಆರ್.ಎಂ.ಹಡಪದರವರು ಅರವತ್ತರ ದಶಕದ ಮೊದಲಲ್ಲಿ ಎಸ್.ಆರ್.ಸ್ವಾಮಿ, ಅಂದಾನಿ, ಪತ್ತಾರ, ಎಸ್.ಎಸ್.ಕುಕ್ಕಿ ಅವರ ಜೊತೆ ಹಡಪದರವರು ರಾಜಸ್ತಾನದ ಬನಸ್ಥಲಿ ಸಾಂಪ್ರದಾಯಕ ಭಿತ್ತಿಚಿತ್ರಗಳ ತರಬೇತಿಗೆ ಹೋಗಿದ್ದರು. ಅಲ್ಲಿಂದ ಮರಳಿದ ನಂತರದಲ್ಲಿ ಇಸ್ರೋಗಾಗಿ ಬಾಹ್ಯಾಕಾಶ ಕುರಿತು ೧೫x೭ ಅಡಿ ಭಿತ್ತಿಚಿತ್ರವನ್ನು ರಚಿಸಿಕೊಟ್ಟರು. ಎಸ್.ಜಿ.ವಾಸುದೇವರವರು ಕಾರ್ಟೂನ್ ಮತ್ತು ಕ್ಯಾರಿಕೇಚರಗಳು ಬೆಂಗಳೂರಿನ ಪತ್ರಿಕೆಯಲ್ಲಿ ಪ್ರಕಟವಾಯಿತು. ಅನೇಕ ತಂತ್ರಶೈಲಿಯನ್ನು ಕಲಿತ ಇವರು ಹಿತ್ತಾಳೆ, ತಾಮ್ರ ಮುಂತಾದ ಲೋಹಗ ಚಪ್ಪಟೆ ಹಾಳೆಗಳ ಅವಕಾಶಗಳಲ್ಲಿ ಹಲವು ಮೈವಳಿಕೆಗಳನ್ನು ರಚಿಸಿ ಯಶಸ್ವಿಯಾಗಿದ್ದಾರೆ. ಈ ಲೋಹದ ಉಬ್ಬು ರೂಪಗಳು ಅವರಿಗೆ ಸಾಕಷ್ಟು ಹೆಸರನ್ನು ಗಳಿಸಿಕೊಟ್ಟಿದುಂಟು ಈ ತಂತ್ರದ ಮೂಲತಃ ದಕ್ಷಿಣ ಭಾರತದ ದೇವಾಲಯಗಳ ಕಲೆಯ ಮೂಲವಾಗಿದ್ದು, ಅದಕ್ಕೆ ಸಮಕಾಲೀನತೆಯನ್ನು ಲೇಪಿಸುವಲ್ಲಿ ವಾಸುದೇವ ಮತ್ತಿತರರು ಗಣನೀಯ ಪಾತ್ರವಹಿಸಿದ್ದಾರೆ. ಎಂ.ಎಸ್.ಮೂರ್ತಿಯವರು ಬೆಂಗಳೂರಿನ ಭೂಮಿ ಕಲಾವಿದರ ತಾಣದಲ್ಲಿ ನೆಲೆಗೊಂಡಿರುವ ಮೂರ್ತಿಯವರು ವಿದ್ಯಾರ್ಥಿಗಳಿಗಾಗಿ ಮ್ಯೂರಲ್ ಇನ್‌ಸ್ಟಾಲೇಷನ್ ಮತ್ತು ಕಲಾವಿಕಾಸದಂತಹ ಶಿಬಿರಗಳಲ್ಲಿ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ದೇಸಿನಗು ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯು ೨೦೦೬ರ ಪುಸ್ತಕ ಬಹುಮಾನಗಳು ಸಂದಿವೆ. ಅಲ್ಲದೆ ಕರ್ನಾಟಕದಲ್ಲಿ ಮರ ಮಾಧ್ಯಮದ ಭಿತ್ತಿಶಿಲ್ಪಗಳು ಆಧುನಿಕ ಯುಗದಲ್ಲಿ ರಚಿಸುತ್ತಿರುವ ಕೀರ್ತಿಯು ಇವರಿಗೆ ಸಲ್ಲುತ್ತದೆ.

ಆಧುನಿಕ ಕಾಲದಲ್ಲಿ ಉಮಾಶಂಕರ, ರಮೇಶ, ಬಂಡ್ರಿ, ಜಿ.ಎಸ್.ಶೆಣೈ ಮುಂತಾದ ಕಲಾವಿದರು ತಮ್ಮದೇ ಆದಾ ಶೈಲಿಯಲ್ಲಿ ಕಲಾಕೃತಿಗಳನ್ನು ರಚಿಸುತ್ತಿದ್ದಾರೆ.

ಇಲ್ಲಿ ಆಧುನಿಕ ಕಲಾವಿದರು ರಚಿಸುತ್ತಿದ್ದ ಕಲಾಕೃತಿಗಳು ಜನರ ಮೆಚ್ಚುಗೆಗೆ ಪಾತ್ರವಾಗಿ ಸೌಂದರ್ಯಯುತವಾಗಿ ಕಾಣಲು ತಮ್ಮ ಮನೆಗಳ ಮೇಲೆ ಭಿತ್ತಿಚಿತ್ರ ಮತ್ತು ಶಿಲ್ಪಗಳನ್ನು ರಚಿಸಿಕೊಳ್ಳತೊಡಗಿದರು. ಈ ಹಿನ್ನೆಲೆಯ ಬೆಂಗಳೂರು ನಗರವು ಮುಂದುವರೆದ ಪ್ರದೇಶವಾದರಿಂದಾಗಿ ಇಲ್ಲಿನ ಕಲಾವಿದರು ಭಿನ್ನಾವಿಭಿನ್ನವಾದಂತಹ ಶೈಲಿಗಳಲ್ಲಿ ಕಲಾಕೃತಿಗಳನ್ನು ರಚಿಸತೊಡಿಗದರು. ಕೆಲವು ಕಲಾವಿದರು ಅದನ್ನೇ ತಮ್ಮ ವೃತ್ತಿಯನ್ನಾಗಿಸಿಕೊಂಡು ಜೀವನವನ್ನು ಸಾಗಿಸುತ್ತಿರುವುದರಿಂದ ಹೆಚ್ಚಿನ ಭಿತ್ತಿಚಿತ್ರ/ಶಿಲ್ಪಗಳನ್ನು ರಚನೆ ಮಾಡುವುದನ್ನು ಕಾಣಬಹುದು.

ಮೈಸೂರು ವಿಭಾಗದಲ್ಲಿಯೂ ಕೂಡಾ ಎಚ್.ಎನ್.ಕೃಷ್ಣಮೂರ್ತಿ, ಬದ್ರಿನಾರಾಯಣ, ಗೀತಾಂಜಲಿ, ಸುರೇಶ ಕುಲಕರ್ಣಿಯವರಂತಹ ಆಧುನಿಕ ಕಲಾವಿದರುಗಳು ತಮ್ಮ ಸ್ವತಃ ಶೈಲಿ, ತಂತ್ರಗಳನ್ನು ಅಳವಡಿಸಿಕೊಂಡು ಕಲಾಕೃತಿಗಳ ರಚನೆಯಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಅದರಲ್ಲೂ

ಎಚ್.ಎನ್.ಕೃಷ್ಣಮೂರ್ತಿಯವರು ಸಿಮೆಂಟ್, ಫೈಬರ್, ಪ್ಲಾಸ್ಟರ್ ಆಫ್ ಪ್ಯಾರೀಸ್ ಇನ್ನೂ ಹಲವಾರು ಮಾಧ್ಯಮಗಳಲ್ಲಿ ಮಲೆನಾಡಿನ ಸಂಸ್ಕೃತಿಯ ಸೊಬಗನ್ನು ತನ್ನ ಕಲಾಕೃತಿಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಅವರಿಗೆ ಸಿಮೆಂಟ್ ಮಾಧ್ಯಮದಲ್ಲಿ ಭಿತ್ತಿಶಿಲ್ಪಗಳನ್ನು ಮಾಡುವುದೆಂದರೆ ತುಂಬಾ ಇಷ್ಟ. ಮೊದಲು ಶಿಲ್ಪಗಳನ್ನು ಮಾಡುತ್ತಿದ್ದ, ಇವರು ನಂತರದಲ್ಲಿ ಭಿತ್ತಿಚಿತ್ರಗಳನ್ನು ರಚಿಸತೊಡಗಿದರು. ಅದರಲ್ಲಿ ಭಿನ್ನಾವಿಭಿನ್ನವಾದಂತಹುಗಳನ್ನು ರಚನೆ ಮಾಡಿ ನೋಡುಗರ ಮನಸ್ಸೆಳೆಯುವಂತೆ ಭಿತ್ತಿಶಿಲ್ಪಗಳನ್ನು ರಚನೆ ಮಾಡುತ್ತಾರೆ.

ಬೆಳಗಾಂವಿ ವಿಭಾಗದಲ್ಲಿ ವಿನಾಯಕ ಪತ್ತಾರ, ಬಹುರೂಪಿ ಸಂತೋಷ ಎಂಬುವವರು, ಈ ಆಧುನಿಕ ಯುಗದಲ್ಲಿ ತಮ್ಮದೇ ಆದ ವಿಭಿನ್ನ ಶೈಲಿಗಳಲ್ಲಿ ಭಿತ್ತಿಚಿತ್ರ ಮತ್ತು ಶಿಲ್ಪಗಳನ್ನು ರಚಿಸುತ್ತಿದ್ದಾರೆ. ಬೆಳಗಾವಿ ಜಿಲ್ಲೆಯ ಗೋಕಾಕನ ವಿನಾಯಕ ಪತ್ತಾರವರು ಅನೇಕ ವರ್ಷಗಳಿಂದ ಉಪನ್ಯಾಸ ವೃತ್ತಿಯ ಜೊತೆಗೆ ಶಿಲ್ಪಿ ಮತ್ತು ಭಿತ್ತಿಶಿಲ್ಪಗಳನ್ನು ರಚಿಸತೊಡಗಿದರು. ಇವು ಜನರ ಮೆಚ್ಚುಗೆಗೆ ಪಾತ್ರವಾದವು. ಬಹುರೂಪಿ ಎಂಬುವವರು ಆಧುನಿಕ ಶೈಲಿಯಲ್ಲಿ ಫೈಬರ್, ಭಿತ್ತಿವರ್ಣ, ಟೆರ್ರಾಕೋಟಾ ಮಾಧ್ಯಮದಲ್ಲಿ ಭಿತ್ತಿಶಿಲ್ಪಗಳನ್ನು ರಚಿಸಿದ್ದು. ಜನಪದ ಶೈಲಿಯಲ್ಲಿ ಹಸಿ ಚಿತ್ರಕಲೆಯನ್ನು ರಚಿಸುತ್ತಿದ್ದನ್ನು ಕಾಣುತ್ತೇವೆ. ಇವರು ಜನರಿಗೆ ಮೆಚ್ಚುಗೆಗೆ ಪಾತ್ರವಾಗುವಂತೆ ಚಿತ್ರಗಳ ರಚನೆಯನ್ನು ಮಾಡುತ್ತಿದ್ದ, ಆದರೂ ಈ ವಿಭಾಗದಲ್ಲಿ ಭಿತಿಚಿತ್ರ/ ಶಿಲ್ಪಗಳು ರಚಿಸುವುದು ಕಡಿಮೆ ಪ್ರಮಾಣದಲ್ಲಿ ರಚಿಸುತ್ತಿದ್ದರು.

ವಿ.ಜಿ.ಅಂದಾನಿಯವರು ಅನೇಕ ಭಿತ್ತಿಚಿತ್ರಗಳನ್ನು ರಚಿಸಿದ್ದಾರೆ. ರಾಜಸ್ಥಾನದ ಬನಸ್ಥಲಿ ವಿದ್ಯಾಪೀಠದಲ್ಲಿ ಸಂಪ್ರದಾಯಿಕ ಭಿತ್ತಿಚಿತ್ರ ರಚನಾ ತರಬೇತಿಗೆಂದು ಕರ್ನಾಟಕದ ಕಲಾವಿದರ ಗುಂಪೊಂದು ಆಯ್ಕೆಯಾಯಿತು. ಅವರುಗಳೆಂದರೆ ಆರ್.ಎಮ್.ಹಡಪದ, ಎಸ್.ಆರ್.ಸ್ವಾಮಿ, ಎಸ್.ಎಸ್.ಕುಕ್ಕಿ, ಕೆ.ಡಿ.ಪತ್ತಾರ ಅವರುಗಳನ್ನೊಳಗೊಂಡ ಈ ಗುಂಪಿನಲ್ಲಿ ಅಂದಾನಿಯವರು ಇದ್ದರು. ಬನಸ್ಥಲಿಯಲ್ಲಿ ಕೆಲಸ ಮಾಡುವ ಮೂಲಕ ಭಿತ್ತಿಚಿತ್ರ ರಚನೆಯ ಹಲವು ತಂತ್ರಗಳನ್ನು ಕಲಿತುಕೊಂಡರು. ಬನಸ್ಥಲಿಯಲ್ಲಿ ತಾವು ಕಲಿತ ಭಿತ್ತಿಸಿದ್ದಂತೆ. ಚಿತ್ರರಚನೆ ವಿವಿಧ ತಾಂತ್ರಿಕ ಅಂಶಗಳನ್ನು ಅನುಸರಿಸಿ ಭಿತ್ತಿಚಿತ್ರ/ಶಿಲ್ಪಕಲೆಯನ್ನು ರಚಿಸುತ್ತಿದ್ದರು. ಮುಳಖೇಡ ರಾಜಲಕ್ಷ್ಮೀ ಸಿಮೆಂಟ್ ಕಾರ್ಖಾನೆ ಕಲಬುರ್ಗಿಯ ಆಡಳಿತ ಕಛೇರಿಗಳಲ್ಲಿ ಭಿತ್ತಿಚಿತ್ರ ರಚೆಯನ್ನು ಮಾಡಿರುವುದನ್ನು ಕಾಣಬಹುದು. ಅದೇ ರೀತಿಯಾಗಿ ಎಸ್.ಎಸ್.ಸಿಂಪಿಯವರು ೧೯೮೮ರಲ್ಲಿ ಗುಲ್ಬರ್ಗಕ್ಕೆ ಹಿಂದಿರುಗಿ ಬಂದು ೧೯೮೮ನೇ ಆಗಸ್ಟ್‌ನಲ್ಲಿ ಸ್ಟೂಡಿಯೋ ಪ್ರಾರಂಭಿಸದರು. ಮುಳಖೇಡ ಪ್ರಥಮ ಬಾರಿಗೆ ರಾಜಶ್ರೀ ಸಿಮೆಂಟ್ ಕಂಪನಿಯಲ್ಲಿ ಭಿತ್ತಿಚಿತ್ರಗಳನ್ನು ಮಾಡುವ ಅವಕಾಶ ೧೯೯೪ರಲ್ಲಿ ಒದಗಿತು. ಗುಲ್ಬರ್ಗಾದಲ್ಲಿ ಭಿತ್ತಿಚಿತ್ರಗಳನ್ನು ಜನರಿಗೆ ಪ್ರಥಮವಾಗಿ ಪರಿಚಯಿಸಿದ ಕೀರ್ತಿ ಸಿಂಪಿಯವರದಾಗಿದೆ.

ವೀರೇಂದ್ರ ಷಾ, ಗೌರಿಶಂಕರ, ಅಮೃತಶಾಹು, ಸಂತೋಷ ರಾಥೋಡ್, ಆಕಾಶ, ಚಂದ್ರಹಾಸ, ಜಾಲಿಯಾಳ, ಪರಶುರಾಮ, ಶಾಹಿದ್ ಪಾಷಾ ಮುಂತಾದ ಆಧುನಿಕ ಕಲಾವಿದರುಗಳು ತಮ್ಮದೇ ಆದಂತಹ

ಶೈಲಿಯಲ್ಲಿ ಭಿತ್ತಿಚಿತ್ರ/ಭಿತ್ತಿಶಿಲ್ಪಗಳನ್ನು ರಚಿಸುತ್ತಿದ್ದು, ಗುಲ್ಬರ್ಗ ವಿಭಾಗದಲ್ಲಿನ ಕಲಾಸಕ್ತರಿಗೆ ಸ್ಫೂರ್ತಿಯಾಗಿ ಬೆಳೆದಿದ್ದಾರೆ. ಭಿತ್ತಿಚಿತ್ರ ಮತ್ತು ಭಿತ್ತಿಶಿಲ್ಪದ ರಚನೆಯಲ್ಲಿ ಗುಲ್ಬರ್ಗಾದ ವಿಭಾಗವು ಎರಡನೆಯ ಸ್ಥಾನದಲ್ಲಿದ್ದು, ಚಿತ್ರ ಮತ್ತು ಶಿಲ್ಪಗಳಿಗೆ ವಿಶೇಷವಾದಂತಹ ಸ್ಥಾನವನ್ನು ನೀಡಿದ್ದಾರೆ.

ಶಂಕರಗೌಡ ಬೆಟ್ಟದೂರವರು ಹೊಸ ದೆಹಲಿಯ ಬಿರ್ಲಾಭವನದಲ್ಲಿ ಗಾಂಧಿಜೀಯವರ ಜೀವನದ ಫ್ರೆಸ್ಕೋ ಮಾದರಿಯ ಭಿತ್ತಿ ಚಿತ್ರರಚನೆ ಭಾರತ ಸರಕಾರದ ಕೋರಿಕೆಯ ಮೇರೆಗೆ ಚೀನಾದ ತುನ್‌ಹಾಂಗ್ ಗುಹಾ ಚಿತ್ರಗಳ ಪ್ರತಿರೂಪ ಬೆಂಗಾಲಿ ಶೈಲಿಯಲ್ಲಿ ನೂರಾರು ಕಲಾಕೃತಿಗಳ ರಚನೆ ರೇಖಾಚಿತ್ರ, ಜಲವರ್ಣ, ಶಿಲ್ಪಕಲೆ, ನೆರಳು ಬೆಳಕು ಮಾದರಿಯಲ್ಲಿ ಹೊಸ ಪ್ರಯೋಗ ಬಾಟಿಕ್ ಚರ್ಮದ ಉಬ್ಬು ಚಿತ್ರಗಳಲ್ಲೂ ಅದ್ಭುತ ಕಲೆಗಾರಿಕೆ ವಿದ್ಯಾರ್ಥಿ ಜೀವನದಲ್ಲಿಯೇ ಇವರು ರಚಿಸುತ್ತಿದ್ದರು.

ಇಂತಹ ಅಪರೂಪದ ಕಲಾವಿದನನ್ನು ಗುರುತಿಸಿ ಬಿರ್ಲಾಭವನದಲ್ಲಿ ಭಿತ್ತಿಚಿತ್ರ ರಚನೆಯನ್ನು ಮಾಡಲು ಆಹ್ವಾನ ಮಾಡಿದ್ದು. ನಮ್ಮ ಕರ್ನಾಟಕದ ಕಲಾವಿದರಿಗೆ ಹೆಮ್ಮೆಯ ಸಂಗತಿಯಾಗಿದೆ. ಈ ರೀತಿಯಾಗಿ ಅನೇಕ ಯುವ ಕಲಾವಿದರು ಆಧುನಿಕ ಯುಗದಲ್ಲಿ ಭಿತ್ತಿಚಿತ್ರ/ಭಿತ್ತಿಶಿಲ್ಪಗಳನ್ನು ರಚಿಸುತ್ತಿದ್ದರು. ಶಿವಾನಂದ ಬಂಟನೂರವರು ಆಧುನಿಕ ಶೈಲಿಯಲ್ಲಿ ಶಿಲ್ಪಕಲಾಕೃತಿಗಳ ರಚನೆಯಲ್ಲಿ ಹೊಸತನದಿಂದ ಕೂಡಿದಂತಹ ಕಲಾಕೃತಿಗಳನ್ನು ಕಾಣಬಹುದು.

ಈ ರೀತಿಯಾಗಿ ಆಧುನಿಕ ಯುಗದಲ್ಲಿ ಕೆಲವು ಕಲಾವಿದರು ಭಿತ್ತಿಚಿತ್ರ/ಶಿಲ್ಪಗಳನ್ನು ವಿವಿಧ ಮಾಧ್ಯಮಗಳಲ್ಲಿ ಭಿನ್ನವಿಭಿನ್ನವಾಗಿ ರಚಿಸುತ್ತಿರುವುದನ್ನು ಕಾಣುತ್ತೇವೆ.

* * *

ಅಧ್ಯಾಯ - ಹತ್ತು

# ಸಮಾರೋಪ

ಕಲೆ ಎನ್ನುವುದು ಮಾನವನ ವೈಶಿಷ್ಟ್ಯವನ್ನು ಅಂತೆಯೇ ನಮ್ಮ ಸುತ್ತಲಿನ ನಿಸರ್ಗ ಹಾಗೂ ದೈನಂದಿನ ಜನ ಜೀವನಗಳು ಜನ ಸಾಮಾನ್ಯರಲ್ಲಿ ಪ್ರಭಾವ ಬೀರುವಂತೆ ಕಲಾವಿದನ ಮನಸ್ಸಿನ ಮೇಲೆ ಪ್ರಭಾವ ಬೀರುತ್ತದೆ. ಆದರೆ ಕಲಾವಿದನಲ್ಲಿರುವ ಆತನ ಸಂವೇದನೆಯು ಹೊರಗಿನ ಈ ಘಟನೆಗಳಿಗೆ ಹಾಗೂ ದೃಶ್ಯಗಳಿಗೆ ಉಳಿದವರಿಗಿಂತ ಭಿನ್ನವಾಗಿ ಹೆಚ್ಚು ತೀವ್ರವಾಗಿ ಸ್ಪಂಧಿಸುತ್ತದೆ. ಈ ಸ್ಪಂಧನ ಹಾಗೂ ತುಡಿತಗಳು ಅವರ ಮಾಧ್ಯಮದ ಮೂಲಕ ಪ್ರಕಟವಾಗಿ ಕಲಾಕೃತಿಯನ್ನಾಗಿಸುತ್ತದೆ.[೧]

ಕಲೆಯಲ್ಲಿ ಕಾಲಕಾಲಕ್ಕೆ ಕಾಣಿಸಿಕೊಳ್ಳುವ ಬದಲಾವಣೆಗಳು ಆಯಾ ಕಾಲದ ಜನರ ಮಾನಸಿಕ ಸಾತ್ವಿಕ ಚೈತನ್ಯ ಮತ್ತು ಅಭಿರುಚಿಗಳಲ್ಲಿ ಆದ ಪರಿವರ್ತನೆಗಳಿಗೆ ಅನುಗುಣವಾಗಿರುತ್ತದೆ. ಕಲಾ ಇತಿಹಾಸದ ಉದ್ದಕ್ಕೂ ನಾವು ಇದನ್ನು ಕಾಣುತ್ತೇವೆ. ಹಾಗೂ ಕಲೆ ಸಮಾಜದ ಕನ್ನಡಿಯಾಗಬಲ್ಲದು ಕೆಲವೊಮ್ಮೆ ಅದು ಅಹೇಡ್ ಆಫ್ ಟೈಮ್ ಸಹ ಆಗಿರಬಲ್ಲದು.[೨]

ಕನ್ನಡ ನಾಡಿನ ಸಂಸ್ಕೃತಿಯ ಅಧ್ಯಯನದಲ್ಲಿ ಭಿತ್ತಿಚಿತ್ರ ಮತ್ತು ಭಿತ್ತಿಶಿಲ್ಪಕ್ಕೆ ಮಹತ್ವಪೂರ್ಣವಾದ ಕೊಡುಗೆಯನ್ನು ನೀಡಿದೆ. ಈ ಕಲಾ ಪ್ರಕಾರವನ್ನು ಬೆಳೆಸುವಲ್ಲಿ ಕರ್ನಾಟಕದ ಜನಸಮುದಾಯದ ಬಹುದೊಡ್ಡ ಮನ್ನಣೆಯನ್ನು ನೀಡಿದೆ. ಪ್ರಾಗೈತಿಹಾಸಿಕ ಕಾಲದಿಂದಲೂ ಭಿತ್ತಿಚಿತ್ರ ಮತ್ತು ಶಿಲ್ಪಕಲೆ ಕಂಡುಬಂದಿದೆ. ಕಾಲದಿಂದ ಕಾಲಕ್ಕೆ ಅನೇಕ ರಚನಾವಿಧಾನ, ತಂತ್ರಗಾರಿಕೆ, ಶೈಲಿ, ಪರಿಕರಗಳಲ್ಲಿ ಬದಲಾವಣೆಗಳಾಗಿವೆ. ಮತ್ತು ಚಿತ್ರರಚನಾ ಮಾಧ್ಯಮಗಳ ಆಯ್ಕೆಯಲ್ಲಿಯೇ ಬೇರೆ ಬೇರೆ ಭಿತ್ತಿಚಿತ್ರ ಮತ್ತು ಶಿಲ್ಪ ರಚನೆಯಲ್ಲಿ ಬಳಕೆಗೊಂಡಿರುದ್ದು ಕಂಡುಬರುತ್ತದೆ. ಹಾಗೆಯೇ ವಸ್ತು ವಿಷಯಗಳ ಆಯ್ಕೆಯ ಸಂದರ್ಭದಲ್ಲಿಯೂ ಆಯಾ ಕಾಲದಲ್ಲಿ ಮತ್ತು ಪ್ರದೇಶದ ಪ್ರಭಾವವನ್ನು ಗಮನಿಸಬಹುದು. ಈ

೧. ಎನ್.ಜಿ.ಅಂಬರೀಶ್: ಎಸ್.ಪ್ರಹ್ಲಾದರವರ ಬದುಕು ಮತ್ತು ಕಲಾಕೃತಿಗಳು, ಪುಟ-೪೮

೨. ಎನ್.ಜಿ.ಅಂಬರೀಶ್: ಚಿತ್ರಕಲಾವಿದ ಡಾ.ಮೋಹನರಾವ್ ಬಿ.ಪಂಚಾಳ, ಬದುಕು ಮತ್ತು ಕಲಾಕೃತಿಗಳು, ಪುಟ-೫೩

ಪ್ರಬಂಧದಲ್ಲಿ ಒಟ್ಟು ಹತ್ತು ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯದಲ್ಲಿ ಈ ಕೆಳಗಿನ ಪ್ರಮುಖ ಅಂಶಗಳನ್ನು ವಿವೇಚಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನ ಕೈಗೊಂಡಿರುವ ಮುಖ್ಯ ಉದ್ದೇಶಗಳು ಒಟ್ಟು ಹತ್ತು ಅಧ್ಯಾಯಗಳ ಸ್ವರೂಪ ಅಧ್ಯಯನಕ್ಕೆ ಬಳಸಿಕೊಂಡಿರುವ ವ್ಯಾಪ್ತಿಯ ಬಗ್ಗೆ ಭಿತ್ತಿಚಿತ್ರಗಳ ಬಗ್ಗೆ ಇದುವರೆಗೂ ನಡೆದಿದ್ದ ಅಧ್ಯಯನಗಳ ಮಾಹಿತಿ ಹಾಗೂ ಅಧ್ಯಯನಕ್ಕೆ ಬಳಸಿದ ವಿಧಾನಗಳನ್ನು ಕುರಿತು ಹೇಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಭಿತ್ತಿಚಿತ್ರ/ಶಿಲ್ಪಕಲೆಗೆ ಇರುವ ಸಾವಿರಾರು ವರ್ಷಗಳ ಇತಿಹಾಸ. ಅದರ ನೆಲೆ ಪ್ರಾರಂಭ ಮಧ್ಯಪ್ರದೇಶದ ಬೆಂಬೆಟ್ಕಾ ಪ್ರದೇಶದ ಕ್ರಿ.ಪೂ.೨೫೦೦ ಪುರಾತನ ಪ್ರಾಗೈತಿಹಾಸಿಕ ಚಿತ್ರಗಳಿವೆ. ಮಹಾರಾಷ್ಟ್ರದ ಜನ್ನಾರ ಪಟ್ಟಣದಲ್ಲಿ ಸಮೀಪ ತುಳಾಜಾ ಗುಹೆಗಳು ಕ್ರಿ.ಶ.೨ನೇ ಶತಮಾನದಲ್ಲಿನ ಭಿತ್ತಿಚಿತ್ರಗಳನ್ನು ಕಾಣಬಹುದು. ಕರ್ನಾಟಕದಲ್ಲಿ ಬೆಳಗಾವಿ ಜಿಲ್ಲೆಯಲ್ಲಿನ ಭಿತ್ತಿಚಿತ್ರಗಳನ್ನು ಕಾಣಬಹುದು. ಕ್ರಿ.ಪೂ.೨೦೦ ವರ್ಷಗಳ ಅವಧಿಗೆ ಸೇರಿವೆ. ೧೦ ಮತ್ತು ೧೪ನೇ ಶತಮಾನದಲ್ಲಿ ಬಾದಾಮಿ, ಹಂಪೆಯಲ್ಲಿ ಕಂಡುಬಂದರೆ ೧೯ನೇ ಶತಮಾನದಲ್ಲಿ ಮೈಸೂರಿನಲ್ಲಿ ಕಂಡುಬರುತ್ತದೆ. ಆಧುನಿಕ ಭಿತ್ತಿಚಿತ್ರಗಳನ್ನು ಅನೇಕ ಮಾಧ್ಯಮಗಳಲ್ಲಿ ರಚನೆಗೊಂಡಿವೆ. ೧೯೪೦-೬೦ರ ದಶಕದಲ್ಲಿ ಮ್ಯೂರಲ್ ಮಾಧ್ಯಮಕ್ಕೆ ಒಂದು ಹೊಸ ಆಯಾಮ ದೊರರಕಿದೆ.

ಶಿಲ್ಪಕಲೆಯು ಕ್ರಿ.ಪೂ.ಸುಮಾರು ೧೫೦೦ರಿಂದ ೧೦.೦೦೦ ಎಂದು ಭಾವಿಸಲಾಗಿದೆ. ಈಜಿಪ್ಟ್ ಮೆಸಪೋಟಾಮಿಯ ನೆಲೆಗಳಲ್ಲಿ ಕಂಡುಬಂದರೆ ಭಾರತದಲ್ಲಿ ಕ್ರಿ.ಪೂ.೨೫೦೦೦ರ ಸುಮಾರಿಗೆ ಶಿಲ್ಪಕಲೆ ಬೆಳಕಿಗೆ ಬಂದಿದೆ. ದಕ್ಷಿಣಭಾರತದಲ್ಲಿ ೨ನೇ ಶತಮಾನದಲ್ಲಿ ಕಂಡುಬಂದರೆ ನವ್ಯಶಿಲ್ಪ ಅಥವಾ ಆಧುನಿಕ ಶಿಲ್ಪವು ೧೮೮೧ರಲ್ಲಿ ಕಂಡುಬಂದಿದೆ. ಕರ್ನಾಟಕದಲ್ಲಿ ೧೯೬೧ರಲ್ಲಿ ಈಗ ಕರ್ನಾಟಕದಲ್ಲಿಅನೇಕ ಕಲಾವಿದರು ಭಿತ್ತಿಶಿಲ್ಪ ಮಾಧ್ಯಮದಲ್ಲಿ ಕಲಾಕೃತಿಗಳ ರಚನೆಯನ್ನು ಮಾಡುವುದನ್ನು ಕಾಣಬಹುದು. ೨೦ನೇ ಶತಮಾನದಲ್ಲಿ ಚಿತ್ರ ಮತ್ತು ಶಿಲ್ಪಗಳಲ್ಲಿ ಅನೇಕ ರೀತಿಯ ಪ್ರಯೋಗಗಳನ್ನು ನಡೆಯುತ್ತಲೇ ಬಂದಿರುವುದನ್ನು ಕಾಣುತ್ತೇವೆ. ಚಿತ್ರ ಮತ್ತು ಶಿಲ್ಪಕಲೆಯನ್ನು ವರ್ಗೀಕರಣವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಅಧ್ಯಾಯ ಮೂರರಲ್ಲಿ ಭಿತ್ತಿ ಎಂಬ ಶಬ್ದದ ಮೂಲ ರೂಪ ಯಾವುದು ಹಿಂದಿನ ಕಾಲದಿಂದ ಯಾವ ಯಾವ ರೀತಿಯಾಗಿ ಭಿತ್ತಿಚಿತ್ರಗಳನ್ನು ರಚನೆ ಮಾಡಿಕೊಂಡು ಬಂದಿದ್ದಾರೆ. ಭಿತ್ತಿಗೆ ಸಾಹಿತ್ಯ ಹಿನ್ನೆಲೆಯಲ್ಲಿ ಯಾವ ರೀತಿ ವ್ಯಾಖ್ಯಾನಿಸಿದ್ದಾರೆ. ಭಿತ್ತಿಚಿತ್ರಗಳು ಭಾರತದಲ್ಲಿ ಕ್ರಿ.ಪೂ.ಒಂದನೆಯ ಶತಮಾನದಲ್ಲಿ ಬೆಳಕಿಗೆ ಬಂದಿವೆ, ಅಲ್ಲಿ ರಚನೆ ಮಾಡುತ್ತಿದ್ದಂತಹ ವಿಧಾನ, ಹೀಗೆ ರಾಜ್ಯದ ಅನೇಕ ಸ್ಥಳಗಳಲ್ಲಿ ಸಾಂದರ್ಭಿಕ ಭಿತ್ತಿಚಿತ್ರಗಳು ರಚಿತಗೊಂಡಿವೆ. ದಖ್ಖನಿ ಶೈಲಿಯಲ್ಲಿ ರಚಿತಗೊಂಡ ವಿಶೇಷ ಚಿತ್ರಗಳು ಅಲ್ಲದೇ ಹಿಂದೂ ಧರ್ಮಕ್ಕೆ ಸಂಬಂಧಿಸಿದಂತಹ ಚಿತ್ರಗಳು ಗುಲ್ಬರ್ಗದಲ್ಲಿ ಕಂಡುಬಂದರೆ ಆಧುನಿಕ ಕಾಲದಲ್ಲಿ ಭಿತ್ತಿಚಿತ್ರಗಳು ಎಲ್ಲೆಲ್ಲಿ ಕಂಡುಬರುತ್ತವೆ.ಅವುಗಳನ್ನು ಹೆಚ್ಚಾಗಿ ಬಳಸುತ್ತಿರುವ ನಗರಗಳಾವವು ಎಂಬುದು ಮತ್ತು ಆಧುನಿಕ

ಭಿತ್ತಿಚಿತ್ರಗಳ ವಿವಿಧ ರಚನೆಯ ಹಂತ ಆಧುನಿಕ ಕಾಲದ ಭಿತ್ತಿಚಿತ್ರದ ವಿಷಯ ವಸ್ತು ಅದರ ಅಳತೆ ಕಾಲಮಾನಗಳ ಬಗ್ಗೆ ಪರಿಕರಗಳ ಬಗ್ಗೆ ವಿವೇಚಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಕೆಲವು ಕ್ಷೇತ್ರಗಳಲ್ಲಿ ಪ್ರಭಾವ ಹೊಂದಿರುವ ಗಾಜನ್ನು ನಮ್ಮ ಆಧುನಿಕ ಕಲಾವಿದರು ಭಿತ್ತಿಚಿತ್ರಕ್ಕೆ ಯಾವ ರೀತಿ ಬಳಸಿಕೊಂಡಿದ್ದಾರೆ. ಅದರ ರಚನಾ ವಿಧಾನಗಳಾವುವು. ಸಧ್ಯದ ಪರಿಸ್ಥಿತಿ ಹೇಗಿದೆ. ಹೊಸತರವಾಗಿ ಭಿನ್ನಾವಿಭಿನ್ನವಾಗಿ ಆಧುನಿಕ ಯುಗದಲ್ಲಿ ಕಲಾವಿದರು ರಚನೆಮಾಡುತ್ತಿದ್ದಾರೆ. ಅದು ಯಾವ ಕಾಲದಿಂದ ಬಳಕೆಯಲ್ಲಿದೆ. ಮೊದಲು ಯಾವ ರೀತಿಯ ಗಾಜಿನ ಚಿತ್ರಗಳನ್ನು ಕಾಣುತ್ತಿದ್ದೇವೆ. ಪ್ರಸ್ತುತ ಕಾಲದಲ್ಲಿ ಯಾವ ರೀತಿ ಗಾಜಿನ ಮಾಧ್ಯಮ ಜನರ ಮೆಚ್ಚುಗೆಗೆ ಪಾತ್ರವಾಗಿದೆ. ಇಂತಹ ಮಾಧ್ಯಮಗಳನ್ನು ಹೆಚ್ಚಾಗಿ ಯಾರು ರಚಿಸಿಕೊಳ್ಳುತ್ತಾರೆ ಎಂಬುವುದನ್ನು ಇಲ್ಲಿ ತಿಳಿಯಬಹುದು.

ಅಧ್ಯಾಯ ಐದರಲ್ಲಿ ಮಾನವನು ತನ್ನ ಬದುಕನ್ನು ರೂಪಿಸಿಕೊಳ್ಳುವಲ್ಲಿ ಮಣ್ಣಿನ ಬಗ್ಗೆ ನಮ್ಮ ನಾಡಿನ ಸಾಹಿತಿಗಳಾದ ದೇ.ಜ.ಗೌ ಹೇಳಿದ ಕೆಲವು ಮಾತುಗಳು ಮೊದಲು ಮಣ್ಣಿನ ಮಡಕೆಯಿಂದ ಮನುಷ್ಯನಿಗೆ ಸೌಂದರ್ಯ ಪ್ರಜ್ಞೆ ಉಂಟಾಗಿದ್ದು. ಇದು ಮೊದಲಿಗೆ ಹರಪ್ಪ ಮತ್ತು ಮಹೆಂಜೋದಾರೊಗಳಲ್ಲಿ ದೊರೆತಂತಹ ಕೆಲವು ವಸ್ತುಗಳು ಆಧುನಿಕ ಕಾಲದಲ್ಲಿ ಮಣ್ಣನ್ನು ಕಲಾವಿದರು ಯಾವ ರೀತಿ ಬಳಸಿಕೊಂಡಿದ್ದಾರೆ. ಅದರ ವಸ್ತುವಿಷಯದ ಬಗ್ಗೆ ಮತ್ತು ಸಿಮೆಂಟ್ ಮಾಧ್ಯಮವನ್ನು ಹಲವಾರು ವರ್ಷಗಳಿಂದ ಬಳಕೆಯನ್ನು ಯಾವ ರೀತಿಯಾಗಿ ಶಿಲ್ಪಗಳಲ್ಲಿ ತೊಡಗಿಸಿಕೊಂಡರು. ಸಿಮೆಂಟ್ ಉಬ್ಬು ಶಿಲ್ಪಗಳನ್ನು ಮೊದಲು ತಯಾರಿಸಿದ್ದು, ದೇವಾಲಯಗಳ ಮೇಲೆ ತಯಾರಿಸಿಕೊಂಡು ಬರುತ್ತಿದ್ದು, ಆಧುನಿಕ ಯುಗದಲ್ಲಿ ಭಿತ್ತಿಶಿಲ್ಪಗಳಲ್ಲಿಯೂ ಸಹಿತ ಅನೇಕ ಪ್ರಯೋಗಗಳನ್ನು ಮಾಡುತ್ತಾ ಕಲಾವಿದನು ತನ್ನಲ್ಲಿ ಹೊಸ ತನವನ್ನು ಭಿನ್ನಾವಿಭಿನ್ನವಾಗಿ ವ್ಯಕ್ತಪಡಿಸುತ್ತಿರುವರು ಹಾಗೂ ಆ ಅಧ್ಯಾಯದಲ್ಲಿ ಬರುವಂತಹ ವಸ್ತುವಿಷಯ ರಚನಾ ವಿಧಾನ ಬಳಸುವ ಪರಿಕರಣಗಳನ್ನು ಇಲ್ಲಿ ವಿವೇಚಿಸಲಾಗಿದೆ.

ಅಧ್ಯಾಯ ಆರರಲ್ಲಿ ಪೈಬರ್ ಮಾಧ್ಯಮದಲ್ಲಿ ಆಧುನಿಕ ಯುಗದಲ್ಲಿ ಎಲ್ಲಾ ಮಾಧ್ಯಮಗಳಿಂದ ಹೆಚ್ಚಿನ ಪ್ರಚಲಿತವನ್ನು ಪಡೆದಿರುವುದನ್ನು ಕಾಣಬಹುದು. ಪ್ರಸ್ತುತ ಸಂದರ್ಭದಲ್ಲಿ ಪೈಬರನ್ನು ಹೆಚ್ಚು ಬಳಕೆ ಮಾಡುತ್ತಿದ್ದು, ಅದು ಹಗುರವಾದ ಮತ್ತು ಬಾಳಿಕೆಗೆ ಬರುವಂತಹ ಮಾಧ್ಯಮವಾಗಿ ಇದರಿಂದ ಯಾವುದೇ ಕಟ್ಟಡದ ಮೇಲೆ ರಚನೆ ಮಾಡಿದರೂ ಅದರ ಸೌಂದರ್ಯವನ್ನು ಹೆಚ್ಚಿಸುತ್ತದೆ. ಇದಕ್ಕೆ ಬಳಸುವಂತಹ ರಚನಾವಿಧಾನ ವಸ್ತುವಿಷಯ ಪರಿಕರಗಳ ಬಗ್ಗೆ ತಿಳಿಯಲಾಗಿದೆ. ಮರದ ಮಾಧ್ಯಮವು ಮೊದಲು ಈಜಿಪ್ಷ್ಯನ್ನರು ಕ್ರಿ.ಪೂ.೨ನೇ ಶತಮಾನದಲ್ಲಿ ರಚನೆಯಾದ ಮರದ ಮೇಲೆ ರಚಿಸುವ ಚಿತ್ರಗಳು ಕಂಡುಬಂದವು, ನಂತರದ ಆಧುನಿಕ ಯುಗದಲ್ಲಿ ಅನೇಕ ಕಲಾವಿದರುಗಳು ಮರದ ಮಾಧ್ಯಮದ ನವ್ಯ ಶೈಲಿಯಲ್ಲಿ ಭಿತ್ತಿಶಿಲ್ಪಗಳನ್ನು ರಚಿಸುತ್ತಿರುವುದನ್ನು ಇಲ್ಲಿ ಹೇಳಲಾಗಿದೆ. ಮರದ ಮಾಧ್ಯಮದಲ್ಲಿನ ರಚನಾ ವಿಧಾನ ಮತ್ತು ಪರಿಕರಗಳ ಬಗ್ಗೆ ಮಾಹಿತಿಯನ್ನು ನೀಡಲಾಗಿದೆ.

ಅಧ್ಯಾಯ ಏಳರಲ್ಲಿ ಸಂಕೀರ್ಣ ಮಾಧ್ಯಮದ ಭಿತ್ತಿಚಿತ್ರ/ಶಿಲ್ಪಗಳು ತುಂಬ ವೈವಿಧ್ಯಮಯವಾಗಿದ್ದು. ಎಲ್ಲಾರ ಗಮನ ಸೆಲೆಯುತ್ತವೆ. ಬೇರೆ ಬೇರೆ ಮಾಧ್ಯಮಗಳ ತೆಗೆದು ರಚಿಸುವಂತ ವಿಧಾನ ಇದು ತುಂಬಾ ಕಷ್ಟಕರವಾದ ಮಾಧ್ಯಮವು ಆಗಿದೆ. ಸಂಕೀರ್ಣ ಮಾಧ್ಯಮದಲ್ಲಿ ಚಿಕ್ಕ ಪ್ರಮಾಣದಿಂದ ಹಿಡಿದು ದೊಡ್ಡ ಪ್ರಮಾಣದವರೆಗೆ ರಚನೆ ಮಾಡಿದ್ದು, ಅದರ ರಚನಾವಿಧಾನ ಅದಕ್ಕೆ ಬಳಸುವಂತಹ ಸಾಮಾಗ್ರಿಗಳನ್ನು ಇಲ್ಲಿ ಕಾಣಬಹುದಾಗಿದೆ.

ಅಧ್ಯಾಯ ಎಂಟರಲ್ಲಿ ಭಿತ್ತಿಚಿತ್ರ/ಶಿಲ್ಪಗಳ ಮೇಲಾದಂತಹ ಪ್ರಭಾವ ಅದರ ರಚನಾ ಕ್ರಮದಲ್ಲಿ ಯಾವ ರೀತಿಯ ಪ್ರೇರಣೆ ಸಿಕ್ಕಿತು. ಅವುಗಳಿಗೆ ಬಳಸುತ್ತಿದ್ದಂತಹ ವಿವಿಧ ತಂತ್ರ, ಶೈಲಿಗಳ ಬಳಕೆ ಯಾವ ರೀತಿ ಮಾಡುತ್ತಿದ್ದರು. ಇದರಿಂದಾಗಿ ಭಿತ್ತಿಚಿತ್ರ ಭಿತ್ತಿಶಿಲ್ಪದ ಮೇಲೆ ಬೀರಿದಂತಹ ಪರಿಣಾಮಗಳನ್ನು ಇಲ್ಲಿಕಾಣಬಹುದು.

ಅಧ್ಯಾಯ ಒಂಭತ್ತರಲ್ಲಿ ಭಿತ್ತಿಶಿಲ್ಪ/ಚಿತ್ರ ರಚನೆ ಮಾಡುತ್ತಿರುವಂತಹ ಪ್ರಮುಖ ಕಲಾವಿದರ ಸಂಕ್ಷಿಪ್ತ ಪರಿಚಯ ಅವರು ಭಿತ್ತಿಚಿತ್ರ ಮತ್ತು ಭಿತ್ತಿಶಿಲ್ಪಕ್ಕೆ ಕೊಟ್ಟಂತಹ ಕೊಡುಗೆ ಭಿತ್ತಿಚಿತ್ರ/ಶಿಲ್ಪ ರಚನೆಯಲ್ಲಿ ಅವರು ನಡೆದುಕೊಂಡು ಬಂದ ದಾರಿ ಬಗ್ಗೆ ಇಲ್ಲಿ ವಿವರಿಸಲಾಗಿದೆ.

ಹತ್ತನೆಯ ಅಧ್ಯಾಯವು ಸಮಾರೋಪವಾಗಿದ್ದು, ಮೇಲಿನ ಒಟ್ಟು ಒಂಭತ್ತು ಅಧ್ಯಾಯಗಳಲ್ಲಿ ಕಂಡುಬರುವ ಕೆಲವು ಪ್ರಮುಖ ಅಂಶಗಳನ್ನು ಈ ಅಧ್ಯಾಯದಲ್ಲಿ ಸಂಕ್ಷೇಪಿಸಲಾಗಿದೆ. ಮತ್ತು ಒಟ್ಟು ಅಧ್ಯಾಯನದ ಫಲಿತಗಳನ್ನು ಈ ಅಧ್ಯಾಯನದ ಕೊನೆಗೆ ನೀಡಲಾಗಿದೆ.

**ಅಧ್ಯಯನದ ಫಲಿತಗಳು**

* ಭಿತ್ತಿಚಿತ್ರಗಳ ಇತಿಹಾಸ ಅದು ಬೆಳೆದುಕೊಂಡು ಬಂದ ಹಾದಿ ಭಿತ್ತಿ ಪದದ ಅರ್ಥ ಅವುಗಳ ನೆಲೆಗಳ ಪರಿಚಯವನ್ನು ತಿಳಿಯಲಾಗಿದೆ.
* ಶಿಷ್ಠ ಪರಂಪರೆಯ ಭಿತ್ತಿಚಿತ್ರಗಳ ಬೆಳವಣಿಗೆಯನ್ನು ಸಾಮಾನ್ಯವಾಗಿ ಬಾದಾಮಿ ವೈಷ್ಣವ ಗುಹೆಯ ಚಾಲುಕ್ಯರಿಂದ ಪ್ರಾರಂಭವಾಯಿತು.
* ಕರ್ನಾಟಕದಲ್ಲಿ ಭಿತ್ತಿಚಿತ್ರ ಬೆಳೆದು ಬಂದಂತಹ ಹಾದಿ.
* ಕರ್ನಾಟಕದಲ್ಲಿ ನವ್ಯ ಕಲೆಯ ಮ್ಯೂರಲ್‌ಗಳು ರಚನೆಯಾಗುತ್ತಿರುವುದು ಅದರಿಂದ ಯುವ ಕಲಾವಿದರಿಗೆ ಪ್ರೋತ್ಸಾಹ.
* ೧೯೮೦-೯೦ ಸೃಜನಾತ್ಮಕ ಕಲೆಗೆ ಒಂದು ಹೊಸ ಆಯಾಮ ಸೃಷ್ಟಿಯಲ್ಲಿ ಯಶಸ್ವಿಯಾಯಿತು.
* ಭಿತ್ತಿರೂಹುಗಳು ಆಧುನಿಕ ಬೇಡಿಕೆಯನ್ನು ಹೆಚ್ಚಿಸಿಕೊಂಡು ಜನಪ್ರಿಯವಾಗುತ್ತಿದ್ದಂತೆ ಸಾಮಾನ್ಯರು ಕೂಡಾ ತಮ್ಮ ಹೊಸ ಕಟ್ಟಡಗಳ ಅಂದ ಹೆಚ್ಚಿಸಿಕೊಳ್ಳುವ ಒಂದು ಅಂಶವಾಗಿ ಆಲೋಚಿಸುವಂತಾಯಿತು.

* ಪ್ರಪಂಚದಲ್ಲಿ ಶಿಲ್ಪಕಲೆಯ ಉಗಮ ಬಹಳ ಪ್ರಾಚೀನವೆಂದು ತಿಳಿಯಲಾಗಿದೆ. ಭಾರತದಲ್ಲಿ ಶಿಲ್ಪಕಲೆಯೂ ಕ್ರಿ.ಪೂ.೨೫೦೦ ಸುಮಾರಿಗೆ ಬೆಳೆದು ಬಂದಿದ್ದು, ಹರಪ್ಪಾ ಮತ್ತು ಮಹೆಂಜೋದಾರೋಗಳಲ್ಲಿ ದೊರೆಯುವ ಮುದ್ರೆ, ಶಿಲ್ಪ, ಮಾತೃದೇವತೆಯ ಗೊಂಬೆ ಕಂಚಿನ ನರ್ತಕಿಯರ ಶಿಲ್ಪಗಳು ಮನದಟ್ಟು ಮಾಡಿವೆ.
* ನವ್ಯ ಕಲೆಗೆ ಬ್ರಿಟಿಷ್ ಕಲೋನಿಯಲ್ ಕಲೆ ಯುರೋಪಿನಲ್ಲಾದ ಕ್ರಾಂತಿಕಾರ ಬೆಳವಣಿಗೆಗಳಿಂದ ನವ್ಯಕಲೆಗೆ ಚಾಲನೆ ಸಿಕ್ಕಿತು.
* ಭಾರತದಲ್ಲಿ ಟೆರ್ರಾಕೋಟಾ ಗಾರೆದಾರು ಶಿಲ್ಪಗಳನ್ನು ಮಾಡುವುದರ ಮೂಲಕ ಹೊಸತನವನ್ನು ಎರವಲು ಬೀರಿದವು. ಪಾಶ್ಚಾತ್ಯ ಪ್ರಭಾವವು ಬೀರಿತು.
* ೧೯೪೧ರಲ್ಲಿ ನವ್ಯ ಶಿಲ್ಪಗಳ ರಚನೆ ಪ್ರಾರಂಭ.
* ನವ್ಯ ಕಲೆ ಬೆಳೆದುಕೊಂಡು ಬಂದ ಹಾದಿ ಹಾಗೂ ನವ್ಯ ಕಲೆಯ ಕೆಲವು ಕಲಾವಿದರುಗಳ ಬೆಳೆಸಿಕೊಂಡು ಬಂದ ಹಾದಿ.
* ೨೦ನೇ ಶತಮಾನದಲ್ಲಿ ಶಿಲ್ಪ ಮತ್ತು ಚಿತ್ರಕಲಾವಿದರ ತಂತ್ರ, ಶೈಲಿ, ರಚನಾ ವಿಧಾನವನ್ನು ಗಮನಿಸುತ್ತಿದ್ದರೆ. ನವ್ಯತೆಗೆ ಹೆಚ್ಚಿನ ಪ್ರೋತ್ಸಾಹ.
* ಕೆಲವು ಸಾಹಿತ್ಯ ಕೃತಿಗಳಲ್ಲಿಯೂ ಭಿತ್ತಿ ಚಿತ್ರಗಳ ಬಗ್ಗೆ ಪ್ರಾಸಂಗಿಕ ವಿವರಗಳು.
* ಭಿತ್ತಿಚಿತ್ರಗಳ ಹುಟ್ಟು ಕ್ರಿ.ಪೂ.ಒಂದನೇ ಶತಮಾನ ಅಜಂತ, ಎಲ್ಲೋರ, ನಾಸಿಕ, ಬಾಗ್ ಸಿಗೇರಿಯ ಭಿತ್ತಿಚಿತ್ರಗಳ ಪ್ರತ್ಯಕ್ಷ ಉದಾಹರಣೆಗಳು.
* ಆಧುನಿಕ ಭಿತ್ತಿಚಿತ್ರಗಳ ರಚನೆಯ ವಿಭಿನ್ನ ಶೈಲಿಯಲ್ಲಿ ರಚನೆ ಭಿತ್ತಿಚಿತ್ರ ರಚನೆ ಮಾಡುವ ವಿಧಾನ ಮತ್ತು ಪರಿಕರಗಳು ಭಿತ್ತಿ ಚಿತ್ರಗಳ ವಸ್ತುವಿಷಯ.
* ಗಾಜಿನ ಮಾಧ್ಯಮ ೮ ಮತ್ತು ೬ನೇ ಬಳಕೆಯಲ್ಲಿದ್ದ ಗಾಜಿನ ವಸ್ತುಗಳು ಮೆಸಪೋಟಾಮಿಯದಲ್ಲಿ ದೊರೆತಿವೆ.
* ಗಾಜಿನ ಕಲಾಕೃತಿಗಳನ್ನು ಆಧುನಿಕ ಯುಗದಲ್ಲಿ ಹೋಟೆಲ್, ಚರ್ಚು ಅರಮನೆ, ಶ್ರೀಮಂತರ ರಚಿಸಿಕೊಂಡಿರುತ್ತಾರೆ.
* ಗಾಜಿನ ತಯಾರಿಕೆ, ಬಣ್ಣಗಳ ಲೇಪನ ಮಾಡುವ ವಿಧಾನ ಮತ್ತು ಪರಿಕರಗಳು.
* ಮಣ್ಣು, ಮೊದಲ ಮಾಧ್ಯಮವಾಗಿ ಬಳಕೆಯಾಗಿದ್ದು, ಹರಪ್ಪ ಮತ್ತು ಮೊಹೆಂಜೋದಾರೋಗಳ ಉತ್ಖನನದಲ್ಲಿ ದೊರೆತ ಕಲಾತ್ಮಕ ಪಾತ್ರೆಗಳು ಮಕ್ಕಳಾಟಿಕೆಗಳು ಇದರಿಂದ ಪ್ರಾಚೀನತೆಯ ನೆನಪು.
* ಆಧುನಿಕ ಕಲಾವಿದರು ಟೆರ್ರಾಕೋಟಾದಲ್ಲಿ ಬಳಸುವಂತ ಹೊಸತನ ಪರಿಕರಗಳ ಟೆರ್ರಾಕೋಟಾ ತಯಾರಿಕೆಯ ವಿಧಾನ.

* ಗಾರೆ ಮಾಧ್ಯಮದ ಕಡೆಯಿಂದ ಸಿಮೆಂಟ್ ಮಾಧ್ಯಮದ ಕಡೆಗೆ ಒಂದು ಗೋಪುರ, ದೇವಾಲಯ, ಶಿಲ್ಪ, ಭಿತ್ತಿಶಿಲ್ಪಗಳ ರಚನೆ.
* ಆಧುನಿಕ ಯುಗದಲ್ಲಿ ಭಿತ್ತಿಶಿಲ್ಪ ರಚನಾ ವಿಧಾನ, ಪರಿಕರಗಳ ಬಗ್ಗೆ ಮಾಹಿತಿ.
* ಫೈಬರ್ ಮಾಧ್ಯಮ ಆಧುನಿಕ ಯುಗದಲ್ಲಿ ಹೆಚ್ಚು ಪ್ರಚಲಿತ ಪಡೆದಂತಹ ಮಾಧ್ಯಮ.
* ಫೈಬರ್ ಮಾಧ್ಯಮ ಒಂದು ಅಗುರವಾದ ಮಾಧ್ಯಮ ಅದರ ರಚನಾ ವಿಧಾನ, ಅದಕ್ಕೆ ಬಳಸುವ ಪರಿಕರಗಳು.
* ಆಧುನಿಕ ಯುಗದಲ್ಲಿ ಕಚ್ಚಾವಸ್ತುಗಳಲ್ಲಿ ರಚನೆ ಮಾಡಿದಾಗ ಮಾಧ್ಯಮಗಳ ಸಮಿಶ್ರಣಗೊಂಡು ಆಗುವಂತಹ ಕೃತಿ. ಅಂದರೆ ಮಣ್ಣು, ಸಿಮೆಂಟ್ ಕಬ್ಬಿಣ ಇನ್ನಿತರ ವಸ್ತುಗಳನ್ನು ಉಪಯೋಗಿಸಿಕೊಂಡು ತಯಾರಿಸುವ ಮಾಧ್ಯಮಗಳಾಗಿವೆ.
* ಆಧುನಿಕ ಯುಗದಲ್ಲಿ ಕಲಾವಿದರುಗಳು ವಿವಿಧ ಮಾಧ್ಯಮಗಳಲ್ಲಿ ರಚಿಸಿ ಅದರಿಂದಾದ ಪ್ರಭಾವಗಳು, ತಂತ್ರ, ಶೈಲಿ, ಪ್ರೇರಣೆಯನ್ನು ತಿಳಿದುಕೊಳ್ಳಲಾಗಿದೆ.
* ಆಧುನಿಕ ಕಲಾವಿದರುಗಳ ಸಂಕ್ಷಿಪ್ತ ಪರಿಚಯ, ಅವರು ಭಿತ್ತಿಚಿತ್ರ ಮತ್ತು ಶಿಲ್ಪಗಳಲ್ಲಿ ಮಾಡಿದಂತಹ ಸಾಧನೆ.
* ಈ ರೀತಿಯ ಫಲಿತಗಳು ಈ ಅಧ್ಯಯನದಲ್ಲಿ ಒಳಗೊಂಡಿವೆ.

* * *

## ಪರಾಮರ್ಶನ ಗ್ರಂಥಗಳು


| ಕ್ರ.ಸಂ | ಗ್ರಂಥ ಮತ್ತು ಪ್ರಕಾಶಕರು | ವರ್ಷ | ಲೇಖಕರು |
|---|---|---|---|
| ೧. | ಆಧುನಿಕ ಕಲೆ<br>ಕರ್ನಾಟಕ ಲಲಿತಕಲಾ ಅಕಾಡೆಮಿ<br>ಬೆಂಗಳೂರು | ೧೯೯೧ | ಪಾಲ್‌ಕ್ಲೀ |
| ೨. | ಉತ್ತರ ಕರ್ನಾಟಕದ ಭಿತ್ತಿಚಿತ್ರ ಕಲೆ<br>ಕನ್ನಡ ವಿಶ್ವವಿದ್ಯಾಲಯಕ್ಕೆ<br>ಸಲ್ಲಿಸಿರುವ ಪಿಹೆಚ್.ಡಿ ಮಹಾಪ್ರಬಂಧ | ೨೦೦೦ | ಯಾದಪ್ಪ ಬಿ.ಪರದೇಶಿ |
| ೩. | ಉತ್ತರ ಕರ್ನಾಟಕದ ಜನಪದ ಶಿಲ್ಪಕಲೆ<br>ಕನ್ನಡ ವಿಶ್ವವಿದ್ಯಾಲಯಕ್ಕ<br>ಸಲ್ಲಿಸಿರುವ ಪಿಹೆಚ್.ಡಿ ಮಹಾಪ್ರಬಂಧ | ೨೦೦೨ | ಶಿವಾನಂದ ಬಂಟನೂರು |
| ೪. | ಕರ್ನಾಟಕ ಜನಪದ ಚಿತ್ರಕಲೆ<br>ವೀರಶೈವ ಅಧ್ಯಯನ ಸಂಸ್ಥೆ<br>ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ<br>ಗದಗ, ಡಂಬಳ | ೧೯೯೩ | ಡಾ.ಎಸ್.ಸಿ.ಪಾಟೀಲ |
| ೫. | ಕಲಾ ಪ್ರಪಂಚ<br>ಎಸ್.ಬಿ.ಎಸ್.ಪಬ್ಲಿಷರ್ಸ್ ಮತ್ತು<br>ಡಿಸ್ಟ್ರಿಬ್ಯೂಟರ್, ಬೆಂಗಳೂರು | ೧೯೭೮ | ಡಾ.ಶಿವರಾಮಕಾರಂತ |
| ೬. | ಕಲಾ ಸಂವೇದನೆಯ ಒಳನೋಟಗಳು<br>ಕರ್ನಾಟಕ ಲಲಿತಕಲಾ ಅಕಾಡೆಮಿ<br>ಬೆಂಗಳೂರು | ೧೯೯೭ | ಕೆ.ವಿ.ಸುಬ್ರಹ್ಮಣ್ಯಂ |
| ೭. | ಕಲಾಕೋಶ<br>ಕರ್ನಾಟಕ ಲಲಿತಕಲಾ ಅಕಾಡೆಮಿ<br>ಬೆಂಗಳೂರು | ೧೯೯೪ | (ಸಂ) ತಿಪ್ಪೇಸ್ವಾಮಿ ಪಿ.ಆರ್ |
| ೮. | ಕರ್ನಾಟಕದ ಭಿತ್ತಿಚಿತ್ರ ಪರಂಪರೆ<br>ಕರ್ನಾಟಕ ಲಲಿತಕಲಾ ಅಕಾಡೆಮಿ<br>ಬೆಂಗಳೂರು | ೧೯೯೮ | ನರಸಿಂಹನ್ ಆ.ಲ |
| ೯. | ಕರ್ನಾಟಕ ಕಲಾದರ್ಶನ ಭಾಗ-೧<br>ನವಕರ್ನಾಟಕ ಪಬ್ಲಿಕೇಶನ್<br>ಬೆಂಗಳೂರು | ೨೦೧೦ | (ಸಂ) ಕೃಷ್ಣಯ್ಯ ಎಮ್.ಎಚ್<br>ಕೃಷ್ಣರಾವ್ ಸಿ.ಆರ್ |
| ೧೦. | ಕರ್ನಾಟಕದ ರಥ ಶಿಲ್ಪಗಳು<br>ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ<br>ಪಿಹೆಚ್.ಡಿ ಮಹಾಪ್ರಬಂಧ | ೨೦೦೫ | ಶಿವಪ್ರಕಾಶ, ತುಕ್ಕಣ್ಣವರ |

| | | | |
|---|---|---|---|
| ೧೧. | ಕರ್ನಾಟಕದ ವಾಸ್ತುಶಿಲ್ಪ ಮತ್ತು ಚಿತ್ರಕಲೆ<br>ಸುಜಾತ ಪಬ್ಲಿಕೇಷನ್, ಧಾರವಾಡ | ೧೯೮೮ | ಸಿಂದಗಿ ರಾಜಶೇಖರ್ |
| ೧೨. | ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ<br>ಮೈಸೂರು ವಿಶ್ವವಿದ್ಯಾಲಯ, ಮೈಸೂರು | ೧೯೭೦ | ಡಾ.ಎಂ.ಚಿದಾನಂದ ಮೂರ್ತಿ |
| ೧೩. | ಕರ್ನಾಟಕದ ಭಿತ್ತಿಚಿತ್ರಗಳು<br>ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು | ೧೯೮೩ | ಬಿ.ವಿ.ಕೆ.ಶಾಸ್ತ್ರಿ |
| ೧೪. | ಕರ್ನಾಟಕ ಜನಪದ ಕಲೆಗಳ ಕೋಶ<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯಕ್ಕೆ, ಹಂಪಿ | ೧೯೯೬ | (ಸಂ) ಪ್ರೋ.ಹಿ.ಚಿ.ಬೋರಲಿಂಗಯ್ಯ |
| ೧೫. | ಕರಕುಶಲ ಕಲೆಗಳು<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯಕ್ಕೆ, ಹಂಪಿ | ೨೦೦೦ | (ಸಂ) ಕರೀಗೌಡ ಬೀಚನಹಳ್ಳಿ |
| ೧೬. | ಕಿನ್ನಾಳ ಕಲೆ<br>ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್<br>ಕಿರುಪ್ರಬಂಧ | ೨೦೦೬ | ರವಿನಾಯಕ |
| ೧೭. | ಕಲಾವಿದ ಎಸ್.ಎಮ್.ಪಂಡಿತ<br>ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ<br>ಪಿಹೆಚ್.ಡಿ ಮಹಾಪ್ರಬಂಧ | ೨೦೦೮ | ಮೋಹನ್‌ರಾವ್ ಬಿ.ಪಂಚಾಳ |
| ೧೮. | ಗಾಜಿನ ಮೇಲಿನ ಚಿತ್ರಗಳು<br>ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ<br>ಪಿಹೆಚ್.ಡಿ ಮಹಾಪ್ರಬಂಧ | ೨೦೧೧ | ನಿಂಗಪ್ಪ ಎಂ.ಅಂಗಡಿ |
| ೧೯. | ನರಗುಂದದ ಭಿತ್ತಿಚಿತ್ರಗಳು<br>ಕನ್ನಡ ವಿಶ್ವವಿದ್ಯಾಲಕ್ಕೆ ಸಲ್ಲಿಸಿದ ಕಿರು ಪ್ರಬಂಧ | ೨೦೦೭ | ಬಶೀರ್ ಅಹ್ಮದ್<br>ವಾಚಮೇಕರ್ |
| ೨೦. | ನಿಜದ ನೆಲೆ ಹಿರೇಮಠ ಬಿ.ಕೆ.ಅಭಿನಂದನಾ ಗ್ರಂಥ<br>ವೈರಾಗ್ಯದ ಮಲ್ಲಣಾರ್ಯ<br>ಪ್ರಕಾಶನ ಬಸವೇಶ್ವರ ವಿದ್ಯಾವರ್ಧಕ ಸಂಘ<br>ಬಾಗಲಕೋಟೆ | ೨೦೦೩ | (ಸಂ) ಡಾ.ಎಸ್.ಸಿ.ಪಾಟೀಲ್<br>ಸತ್ಯಾನಂದ ಪಾತ್ರೋಟ |
| ೨೧. | ಚಿತ್ರಕಲಾ ಪ್ರಪಂಚ<br>ಕರ್ನಾಟಕ ಲಲಿತಕಲಾ ಆಕಾಡೆಮಿ<br>ಬೆಂಗಳೂರು | ೧೯೯೨ | (ಪ್ರ.ಸಂ) ವಿ.ಟಿ.ಕಾಳೆ |
| ೨೨. | ಚಿತ್ರಕಲಾ ಕೈ ದೀಪ<br>ಸಿಹಾಮಿ ಪಬ್ಲಿಕೇಶನ್ಸ್, ಗದಗ | ೧೯೭೦ | ಡಾ.ಎಸ್.ಎಂ.ಶಿರಹಟ್ಟಿ |
| ೨೩. | ದಖನಿ ಚಿತ್ರಕಲೆ<br>ಕರ್ನಾಟಕ ಲಲಿತಕಲಾ ಅಕಾಡೆಮಿ<br>ಬೆಂಗಳೂರು | ೨೦೧೧ | ಅರುಣಿ ಎಸ್.ಕೆ. |

೨೪. ಭಾರತೀಯ ಚಿತ್ರಕಲೆ — ೧೯೯೮ — ಶಿವರಾಮಮೂರ್ತಿ ಸಿ
ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ

೨೫. ಭಾರತೀಯ ಕಾವ್ಯಮೀಮಾಂಸೆ — ೧೯೫೩ — ತೀ.ನಂ.ಶೀಕಂಠಯ್ಯ
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ
ಮೈಸೂರು

೨೬. ಭಾರತೀಯ ಚಿತ್ರಕಲೆ — ೧೯೩೫ — ಡಾ.ಶಿವರಾಮ ಕಾರಂತ
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು

೨೭. ಭಾರತೀಯ ಚಿತ್ರಕಲೆ — ೧೯೭೯ — ಬಿ.ಪಿ.ಬಾಯರಿ
ಪ್ರತಿಭಾ ಗ್ರಂಥ ಮಾಲೆ, ಧಾರವಾಡ

೨೮. ಬಾನಯ್ಯಾ ಗರುಡಾದ್ರಿ — ೧೯೯೫ — ಬಸವರಾಜ ಉಪ್ಪಿನ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು

೨೯. ಭಾರತೀಯ ಸಂಸ್ಕೃತಿ — ೧೯೭೫ — ಎಸ್.ಶ್ರೀಕಂಠಶಾಸ್ತ್ರಿ
ಪ್ರಸಾರಾಂಗ, ಮೈಸೂರು
ವಿಶ್ವವಿದ್ಯಾಲಯ, ಮೈಸೂರು

೩೦. ಬಾದಾಮಿ ಒಂದು ಸಾಂಸ್ಕೃತಿಕ ಅಧ್ಯಯನ — ೨೦೦೦ — ಡಾ.ಶೀಲಾಕಾಂತ ಪತ್ತಾರ
ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೧. ಎಸ್.ಪ್ರಹ್ಲಾದರವರ ಬದುಕು ಮತ್ತು ಕಲಾಕೃತಿಗಳು — ೨೦೧೧ — ಎನ್.ಜಿ.ಅಂಬರೀಶ್
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರು ಪ್ರಬಂಧ

೩೨. ಕೊಪ್ಪಳ ಸಾಂಸ್ಕೃತಿಕ ಪರಂಪರೆ — ೧೯೯೮ — ಬಿ.ಸಿ.ಪಾಟೀಲ
ಹರಿಹರ ಪ್ರಕಾಶನ, ಕೊಪ್ಪಳ

೩೩. ಚಿತ್ರಕಲಾವಿದ ಡಾ.ಮೋಹನರಾವ್ — ೨೦೦೮ — ಎನ್.ಜಿ.ಅಂಬರೀಶ್
ಬಿ.ಪಂಚಾಳರ ಬದುಕು ಮತ್ತು ಕಲಾಕೃತಿಗಳು
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಕಿರುಪ್ರಬಂಧ

೩೪. ವಜ್ರವಿಜಯ ನೆನಪಿನ ಸಂಚಿಕೆ — ೨೦೦೭ — (ಸಂ) ಡಾ.ಮೋಹನರಾವ್ ಬಿ. ಪಾಂಚಾಳ
ವಿಜಯಕಲಾಮಂದಿರ ವಜ್ರ
ವಾರ್ಷಿಕೋತ್ಸವ ಸಮಿತಿ

೩೫. ವರ್ಣ ಸಂಚಯ — ೨೦೦೧ — ಡಾ.ಎಸ್.ಸಿ.ಪಾಟೀಲ
ವಿಜಯ ಚಿತ್ರಕಲಾ ಮಹಾವಿದ್ಯಾಲಯ
ಇಲಕಲ್

೩೬. ಶಾಂತಿನಿಕೇತನದ ಭಿತ್ತಿಚಿತ್ರಗಳು — ೨೦೧೧ — ಕಾಶಿನಾಥ ಡಿ.ವಡ್ಕರ್
ಗುಲ್ಬರ್ಗಾ ವಿಶ್ವವಿದ್ಯಾಲಯಕ್ಕೆ ನಿಲ್ಲಿಸಿದ
ಪಿಹೆಚ್.ಡಿ ಮಹಾಪ್ರಬಂಧ

| ಸಂ. | ಗ್ರಂಥ | ವರ್ಷ | ಲೇಖಕರು |
|---|---|---|---|
| ೩೭. | ಸಾಹಿತ್ಯ ಮತ್ತು ಚಿತ್ರಕಲೆ<br>ಸಿ.ಎಂ.ಎನ್.ಪ್ರಕಾಶನ<br>ಬೆಂಗಳೂರು | ೨೦೧೧ | ಚಂದ್ರಕಾಂತ ಕೂಸನೂರು |
| ೩೮. | ಸಾಹಿತ್ಯದಲ್ಲಿ ಚಿತ್ರಕಲೆ<br>ಸಿ.ಎಂ.ಎನ್.ಪ್ರಕಾಶನ<br>ಬೆಂಗಳೂರು | ೧೯೮೯ | ಎನ್.ಮರಿಶಾಮಾಚಾರ್ |
| ೩೯. | ಸಂಪ್ರದಾಯ ಶಿಲ್ಪಕಲೆ ಮತ್ತು ಚಿತ್ರಕಲೆ<br>ಶಿಲ್ಪಕಲಾ ಪ್ರತಿಷ್ಠಾನ, ಬೆಂಗಳೂರು | ೧೯೮೩ | ಡಾ.ಎಸ್.ಕೆ.ರಾಮಚಂದ್ರರಾವ್ |
| ೪೦. | ಸಾಹಿತ್ಯ ಮತ್ತು ಚಿತ್ರಕಲೆ<br>ರಾಘವ ಪ್ರಕಾಶನ<br>ಬೆಂಗಳೂರು | ೧೯೮೪ | ವಿ.ಸೀತಾರಾಮಯ್ಯ |
| ೪೧. | ಶೃಂಗಾರ ಲಹರಿ<br>ಸಿ.ಎಂ.ಎನ್.ಪ್ರಕಾಶನ<br>ಬೆಂಗಳೂರು | ೧೯೮೯ | ಎಂ.ಎಚ್.ಕೃಷ್ಣಯ್ಯ |
| 42. | Traditinal painting<br>of Karnataka<br>CKP, Bangalore | 1980 | S.R.Rao<br>B.V.K.Shastry |
| 43. | The Chalukya of Badami<br>Bangalore | 1978 | M.S.Nagaraj Rao |
| 44. | It's History and Monuments Motilas<br>Banarasiday Publishers<br>Private Limited, Dehli | 1995 | V.G.Andani |
| 45. | Vijayanagara Sexcentenary<br>Commemoration Volume<br>Dharwad, Vijayanagara<br>Painting & Form Lepakshi | 1936 | C.Shivarama murti<br>Ibid S.Paramasivah |
| 46. | Bijapur Municipality<br>Century Souriner<br>Decani School, Bijapur | 1954 | Motichandra |
| 47. | Souviner form The Sibi<br>Temple<br>The Sibi Murals | 1988 | R.Ramkrishna |
| 48. | Vijayanagara Painting<br>Delhi | 1985 | S.Sivaramamurti |
| 49. | Painting Karnataka<br>Hand Book<br>Mysore | 1924 | D.K.Bharadvaj (Ed.,) |


* * *

<u>ಸಂದರ್ಶಕರ ವಿವರ</u>

| ಕ್ರ.ಸಂ | ಹೆಸರು | ವಯಸ್ಸು | ಸ್ಥಳ | ವೃತ್ತಿ |
|---|---|---|---|---|
| ೦೧. | ವೆಂಕಟಚಲಪತಿ | ೬೩ | ಬೆಂಗಳೂರು | ಕಲಾವಿದರು |
| ೦೨. | ಡಾ.ಎಂ.ಎಸ್.ಮೂರ್ತಿ | ೫೨ | ಬೆಂಗಳೂರು | ಭಿತ್ತಿಕಲಾವಿದರು |
| ೦೩. | ಡಾ.ವಿ.ಜಿ.ಅಂದಾನಿ | ೬೫ | ಗುಲ್ಬರ್ಗಾ | ಕಲಾವಿದರು |
| ೦೪. | ಎಸ್.ಎಸ್.ಸಿಂಪಿ | ೭೧ | ಗುಲ್ಬರ್ಗಾ | ಕಲಾವಿದರು |
| ೦೫. | ವಿರೇಂದ್ರ ಷಾ | ೩೮ | ಗುಲ್ಬರ್ಗಾ | ಕಲಾವಿದರು |
| ೦೬. | ಎನ್.ಎಮ್.ದಾಟನಾಳ | ೫೨ | ಧಾರವಾಡ | ಪ್ರಾಚಾರ್ಯರು |
| ೦೭. | ಡಾ.ಯಾದಪ್ಪ ಬಿ.ಪರದೇಶಿ | ೪೯ | ಬಾದಮಿ | ಉಪನ್ಯಾಸಕರು |
| ೦೮. | ಎಸ್.ಎನ್.ಕೃಷ್ಣಮೂರ್ತಿ | ೬೫ | ತೀರ್ಥಹಳ್ಳಿ | ಕಲಾವಿದರು |
| ೦೯. | ಡಾ.ಶಿವಾನಂದ ಬಂಟನೂರು | ೪೬ | ಕನ್ನಡ ವಿಶ್ವವಿದ್ಯಾಲಯ,ಹಂಪಿ | ಉಪನ್ಯಾಸಕರು |
| ೧೦. | ಡಾ.ಮೋಹನ್‌ರಾವ್ ಬಿ.ಪಂಚಾಳ | ೩೬ | ಕನ್ನಡ ವಿಶ್ವವಿದ್ಯಾಲಯ,ಹಂಪಿ | ಉಪನ್ಯಾಸಕರು |
| ೧೧. | ಡಾ.ವಿಶ್ವೇಶ್ವರಿ ತಿವಾರಿ | ೩೭ | ಗುಲ್ಬರ್ಗಾ ವಿಶ್ವವಿದ್ಯಾಲಯ | ಉಪನ್ಯಾಸಕರು |
| ೧೨. | ಡಾ.ಗೀತಾಂಜಲಿ | ೩೬ | ಮೈಸೂರು | ಉಪನ್ಯಾಸಕರು |
| ೧೩. | ಚಂದ್ರಹಾಸ ಜಾಲಿಹಾಳ | ೩೬ | ಗುಲ್ಬರ್ಗಾ | ಉಪನ್ಯಾಸಕರು |
| ೧೪. | ರಮೇಶ್ ಬಂಡ್ರಿ | ೩೬ | ಬೆಂಗಳೂರು | ಕಲಾವಿದರು |
| ೧೫. | ವಿಶ್ವಕರ್ಮಚಾರ್ಯ | ೪೨ | ಚಿಕ್ಕಮಂಗಳೂರು | ಪ್ರಾಚಾರ್ಯರು |
| ೧೬. | ಅಮೃತ ಸಾಹು | ೪೩ | ಗುಲ್ಬರ್ಗಾ | ಉಪನ್ಯಾಸಕರು |
| ೧೭. | ಬದ್ರಿನಾರಾಯಣ | ೩೬ | ಶಿವಮೊಗ್ಗ | ಕಲಾವಿದರು |
| ೧೮. | ಕಣ್ಣನ್ | ೬೪ | ಹಿರೇಮಂಗಳೂರು | ಅರ್ಚಕರು |
| ೧೯. | ನಿರ್ಮಲ ಕುಮಾರಿ | ೪೨ | ಬೆಂಗಳೂರು | ಉಪನ್ಯಾಸಕರು |
| ೨೦. | ಉಮೇಶ ಹಡಪದ | ೫೪ | ಬೆಂಗಳೂರು | ಪ್ರಾಚಾರ್ಯರು |
| ೨೧. | ಜಯಣ್ಣಚಾರ್ | ೬೫ | ಚಿಕ್ಕಮಂಗಳೂರು | ಶಿಲ್ಪಕಲಾವಿದರು |
| ೨೨. | ಸುರೇಶ್ | ೪೦ | ಶಿರಸಿ | ಅರ್ಚಕರು |
| ೨೩. | ಗೋವರ್ಧನ ಲಾಲ್ | ೫೩ | ರಾಯಚೂರು | ಅರ್ಚಕರು |
| ೨೪. | ರಮೇಶ | ೪೫ | ಶಿರಸಿ | ಅರ್ಚಕರು |

| | | | |
|---|---|---|---|
| ೨೫. | ಚಿಂತಾಮಣಿ | ೩೧ ಮೈಸೂರು | ಉಪನ್ಯಾಸಕರು |
| ೨೬. | ಶ್ರೀಶೈಲ ಹುನ್ನೂರ | ೩೦ ಬೆಂಗಳೂರು | ಅನಿಮೇಶನ್ |
| ೨೭. | ಹರ್ಷಾ | ೩೭ ಚಿಕ್ಕಮಗಳೂರು | ಉಪನ್ಯಾಸಕರು |
| ೨೮. | ಚೇತನ | ೩೧ ಚಿಕ್ಕಮಗಳೂರು | ಕಲಾವಿದರು |
| ೨೯. | ಮಲ್ಲಿಕಾರ್ಜುನ ಮಹಾಮನಿ | ೩೬ ಬಾದಾಮಿ | ಕಲಾವಿದರು |
| ೩೦. | ವೀರೇಶ್ ರುದ್ರಸ್ವಾಮಿ | ೨೯ ಬೆಂಗಳೂರು | ಕಲಾವಿದ್ಯಾರ್ಥಿ |
| ೩೧. | ಶಾಹಿದ್ ಪಾಷಾ | ೩೩ ಗುಲ್ಬರ್ಗಾ | ಸಂಶೋಧನಾ ವಿದ್ಯಾರ್ಥಿ |
| ೩೨. | ಪರಶುರಾಮ | ೩೪ ಗುಲ್ಬರ್ಗಾ | ಸಂಶೋಧನಾ ವಿದ್ಯಾರ್ಥಿ |

* * *

## ಸಂಕ್ಷೇಪಗಳು

| | | | |
|---|---|---|---|
| ೦೧. | ಪ್ರ.ಸಂ | : | ಪ್ರಧಾನ ಸಂಪಾದಕರು |
| ೦೨. | ಸಂ | : | ಸಂಪಾದಕ |
| ೦೩. | ಕ.ಲ.ಅ.ಬೆಂ | : | ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು |
| ೦೪. | ಕ.ವಿ.ವಿ.ಹಂ | : | ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೦೫. | ಗು.ವಿ.ವಿ | : | ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ |
| ೦೬. | ಮೈ.ವಿ.ವಿ | : | ಮೈಸೂರು ವಿಶ್ವವಿದ್ಯಾಲಯ, ಮೈಸೂರು |
| ೦೭. | ಮ.ಪ್ರ | : | ಮಹಾಪ್ರಬಂಧ |
| ೦೮. | ಕಿ.ಪ್ರ | : | ಕಿರು ಪ್ರಬಂಧ |
| ೦೯. | ಪು.ಸಂ | : | ಪುಟಸಂಖ್ಯೆ |

* * *

